ಪ್ರಚಾರ ಪುಸ್ತಕಮಾಲೆ–೨೪೩

# ಕುಮಾರ ವಾಲ್ಮೀಕಿ

ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ




1983

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ "ಸೆನೆಟ್" ಸಭೆಯ ಪ್ರಾರಂಭೋತ್ಸವ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಪ್ರಸಾರಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ ಸುಲಭಗ್ರಾಹ್ಯವೂ ಆದ ಕನ್ನಡಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದುಕೊಂಡು,

ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸಗಳು ವಿಶ್ವ ವಿದ್ಯಾನಿಲಯದ ಮೆಟ್ಟಲನ್ನು ಹತ್ತಲು ಅವಕಾಶವಿಲ್ಲದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ; ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ ನಾಡಿನ ಬೇರೆಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ; ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ದುಃಖಕ್ಕೆ ಮೂಲಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ ವಿಶಾಲಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳಿವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರ ಬಿದ್ದಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೆ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರನಲವತ್ತೆರಡು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ ಅವರ 'ಕುಮಾರ ವಾಲ್ಮೀಕಿ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

ಮೈಸೂರು

**ಕೆ. ಎಸ್. ಹೆಗ್ಡೆ**
ಕುಲಪತಿ

# ಅರಿಕೆ

ಪಿಎಚ್.ಡಿ.ಗಾಗಿ ಸಿದ್ಧಪಡಿಸಿದ್ದ ‘ ಕುಮಾರ ವಾಲ್ಮೀಕಿ—ಒಂದು ಅಧ್ಯಯನ ’ ಎಂಬ ನನ್ನ ಗ್ರಂಥವನ್ನು 1976 ರಲ್ಲಿ ಪ್ರಕಾಶನಗೊಳಿಸಿ, ನನ್ನ ಬೆನ್ನುತಟ್ಟಿ ಆಶೀರ್ವದಿಸಿದ ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗವು ಇದೀಗ—ಕುಮಾರ ವಾಲ್ಮೀಕಿ—ಕುರಿತು ಪರಿಚಯಾತ್ಮಕವಾದ ಹೊತ್ತಿಗೆಯನ್ನು ಪ್ರಕಟಿಸಿ ನನ್ನ ಋಣಭಾರವನ್ನು ಹೆಚ್ಚಿಸಿದೆ. ಸಂಬಂಧಪಟ್ಟ ಎಲ್ಲರಿಗೂ ನನ್ನ ಕೃತಜ್ಞತೆಯ ನಮನಗಳು ಸಲ್ಲಬೇಕು. ನನ್ನ ಅಧ್ಯಯನಕ್ಕೆ ಪ್ರೇರಣೆ ನೀಡುತ್ತ ಮಾರ್ಗದರ್ಶನವಿತ್ತು ಹರಸಿದ ಹಿರಿಯ ಕವಿ ಪ್ರಾ. ಎಸ್. ವಿ. ಪರಮೇಶ್ವರ ಭಟ್ಟರನ್ನು ಪೂಜ್ಯ ಭಾವದಿಂದ ಸ್ಮರಿಸಿ, ವಂದಿಸುತ್ತಿದ್ದೇನೆ. ಸಹೃದಯರ ಪ್ರತಿಕ್ರಿಯೆಗಳನ್ನು ಸಂತೋಷದಿಂದ ನಿರೀಕ್ಷಿಸುತ್ತಿರುವೆ.

**ಹೊಸಬೆಟ್ಟು ಸೀತಾರಾಮ ಆಚಾರ್ಯ**

## ಪೀಠಿಕೆ

ಆದಿಕವಿಯೆಂದು ಮಾನ್ಯನಾದ ವಾಲ್ಮೀಕಿ ಮಹಾಕವಿಯ ರಾಮಾಯಣವು ಕಾವ್ಯಜಗತ್ತಿನಲ್ಲೆಲ್ಲ ಅದ್ವಿತೀಯವೆನಿಸಿದ ಪ್ರಸಿದ್ಧ ಕೃತಿ. ಮಾನವ ಜೀವನದ ಉಜ್ವಲ ಆದರ್ಶಗಳನ್ನು ವಾಲ್ಮೀಕಿಯು ಚಿತ್ರಿಸಿದ ರೀತಿ ಕಲಾತ್ಮಕ ವಾದದ್ದು, ಅತ್ಯಂತ ಹೃದಯಂಗಮವಾದದ್ದು. ಹಾಗಾಗಿ ಅದು ಅಖಂಡ ಭಾರತ ಜನತೆಯ ಅಸಾಧಾರಣ ಸಾಂಸ್ಕೃತಿಕ ಸಂಪತ್ತಾಗಿ ಮೆರೆಯುತ್ತಿದೆ. ಶತಶತಮಾನಗಳಲ್ಲಿ ಮಾನವನ ಚಿಂತನೆಗಳ ಮೇಲೆ, ಸಾಹಿತ್ಯ ಪ್ರಪಂಚದ ಮೇಲೆ ರಾಮಾಯಣದಷ್ಟುಪ್ರಭಾವ ಬೀರಿದ ಕೃತಿ ಇನ್ನೊಂದಿಲ್ಲ ಎಂಬ ಹೆಗ್ಗಳಿಕೆಗೂ ಅದು ಪಾತ್ರವಾಗಿದೆ.

ವಾಲ್ಮೀಕಿಯೆಂಬ ಗಿರಿಶಿಖರದಿಂದ ಹುಟ್ಟಿಹರಿದು ಶ್ರೀರಾಮ ನೆಂಬ ಮಹಾಸಾಗರದತ್ತ ಸಾಗುತ್ತಿರುವ ಮಹಾನದಿ— ಶ್ರೀಮದ್ರಾಮಾಯಣ. ಈ ಆದಿಕಾವ್ಯದ ದಿವ್ಯಪ್ರವಾಹವು ದೇಶ, ಭಾಷಾ-ಭೇದಗಳನ್ನು ಅಲ್ಲಗಳೆದು, ಎಲ್ಲ ನಾಡು, ನುಡಿ ಗಳಲ್ಲೂ ತನ್ನದೇ ರೀತಿಯಿಂದ ತುಂಬಿ ಹರಿದಿದೆ, ಜನತೆಯ ನರ ನಾಡಿಗಳಲ್ಲಿ ಜೀವನದಿಯಂತೆ—ಅಂತರ್ಗಾಮಿಯಾಗಿ ಪ್ರವಹಿಸು ತ್ತಿದೆ.

ಇಂತಹ ಶ್ರೀರಾಮ ಕಥೆಯನ್ನು ಮೊತ್ತಮೊದಲಾಗಿ ಕನ್ನಡಿಸಿ ಧನ್ಯತೆ ಪಡೆದ ಕನ್ನಡ ಕವಿ-ಕುಮಾರ ವಾಲ್ಮೀಕಿ. 'ತೊರವೆ ರಾಮಾಯಣ'ವೆಂದೇ ಇವನ ಕೃತಿ ಪ್ರಸಿದ್ಧವಾಗಿದೆ. ತೊರವೆ ಎನ್ನುವುದು ಒಂದು ಸ್ಥಳನಾಮ. ಅದು ಇಂದಿನ ಬಿಜಾಪುರದ ಬಳಿಯ ಒಂದು ಕ್ಷೇತ್ರ. ಅಲ್ಲಿಯ ನರಹರಿ ದೇವಾಲಯವು ಸಾಕಷ್ಟು ಪ್ರಾಚೀನ; ಐತಿಹಾಸಿಕ ಮಹತ್ವ ಪಡೆದ ಸ್ಥಾನ.

ತೊರವೆಯ ನರಹರಿಯೇ ಕವಿ ಕುಮಾರ ವಾಲ್ಮೀಕಿಯ ಅಧಿದೈವ. ನರಹರಿಯನ್ನೇ ತನ್ನ ಕಾವ್ಯದ ನಾಯಕನೆಂದು ಭಕ್ತಿಯಿಂದ ಕೊಂಡಾಡಿ ಶ್ರೀರಾಮ ಕಥೆಯನ್ನು ಅವನು ರಚಿಸತೊಡಗಿದ. ತನ್ನ ಕೃತಿಯ ಪ್ರತಿಸಂಧಿಯ ಕೊನೆಯಲ್ಲಿ 'ತೊರವೆಯ ನರಹರಿ' ಎಂಬ ಅಂಕಿತವನ್ನು ಕವಿ ಬಳಸಿದ್ದಾನೆ.

ಗದುಗಿನ ವೀರನಾರಾಯಣನ ಕಿಂಕರನಾದ ಕುಮಾರವ್ಯಾಸನ 'ಕರ್ಣಾಟಕ ಭಾರತ ಕಥಾಮಂಜರಿ'ಯು 'ಗದುಗಿನ ಭಾರತ'ವೆಂದು ಪ್ರಸಿದ್ಧಿಗೊಂಡಂತೆ, ತೊರವೆಯ ನರಹರಿಯ ಭಕ್ತನಾದ ಕುಮಾರ ವಾಲ್ಮೀಕಿಯ 'ಕರ್ಣಾಟಕ ರಾಮಾಯಣವು ತೊರವೆ ರಾಮಾಯಣ'ವೆಂದು ಜನಪ್ರಿಯವಾಗಿದೆ.

ಕುಮಾರ ವಾಲ್ಮೀಕಿಯ ತೊರವೆ ರಾಮಾಯಣವು ಭಾಮಿನಿ ಷಟ್ಪದಿ ಛಂದಸ್ಸಿನಲ್ಲಿದೆ. ಒಟ್ಟು ೬ ಕಾಂಡಗಳಿರುವ ಈ ಕೃತಿಯಲ್ಲಿನ ಸಂಧಿಗಳು ೧೧೨. ಒಟ್ಟು ಷಟ್ಪದಿಗಳ ಸಂಖ್ಯೆ ೫೧೦೩.

ಶ್ರೀರಾಮ ಪಟ್ಟಾಭಿಷೇಕದವರೆಗೆ ಮಾತ್ರ ಕುಮಾರ ವಾಲ್ಮೀಕಿಯ ರಾಮಾಯಣದ ಕಥೆ ಇದೆ. ಸೀತಾ ಪರಿತ್ಯಾಗ ಮೊದಲಾದ 'ಉತ್ತರಕಾಂಡ' ಕಥೆಯನ್ನು ಇವನು ಹೇಳಿಲ್ಲ. 'ಉತ್ತರಕಾಂಡ'ವು ಆದಿಕವಿ ವಾಲ್ಮೀಕಿ ರಚಿತವಲ್ಲ ಎಂಬ ಭಾವನೆ ಕುಮಾರ ವಾಲ್ಮೀಕಿಗೂ ಇದ್ದಿರಬಹುದು. ಅಷ್ಟಲ್ಲದೆ, ತನಗೆ ಅನುಸರಣೀಯನಾದ ಕುಮಾರವ್ಯಾಸನು ಧರ್ಮರಾಯನ ಪಟ್ಟಾಭಿಷೇಕದೊಂದಿಗೆ ತನ್ನ ಕಾವ್ಯಕ್ಕೆ ಮಂಗಳಹಾಡಿದ ಆದರ್ಶವೂ ಕುಮಾರ ವಾಲ್ಮೀಕಿಯ ಕಣ್ಣಮುಂದೆ ಇದ್ದಿರಬಹುದು.

## ಸ್ಥೂಲ ಪರಿಚಯ, ವೈಶಿಷ್ಟ್ಯಗಳು

ಶ್ರೀ ಜನಕಜಾ ರಮಣ ವಿಮಲ ಸ
ರೋಜ ಸಂಭವ ಜನಕನನುಪಮ
ರಾಜಶೇಖರ ವಿನುತ ನಿಖಿಳಾಮರ ಕಿರೀಟಚಯ
ರಾಜಿತಾಮಲ ಲಲಿತಪದಪಂ
ಕೇಜ ನಾನತ ಜನ ದಯಾಸುರ
ಭೂಜ ತೊರವೆಯ ರಾಯ ನರಹರಿ ಪಾಲಿಸುಗೆ ಜಗವ

ಎಂದು ತೊರವೆಯ ನರಹರಿಯ ಸ್ತುತಿಯೊಂದಿಗೆ ಕುಮಾರ ವಾಲ್ಮೀಕಿ ಕಾವ್ಯಾರಂಭ ಮಾಡುತ್ತಾನೆ. ಈಶ್ವರ, ಬ್ರಹ್ಮ, ಮುಖ್ಯಪ್ರಾಣರನ್ನು ಪ್ರಾರ್ಥಿಸಿ–ಮುಂದೆ ಗುರು ಮಧ್ವಾಚಾರ್ಯರನ್ನು, ಮಹಾಕವಿ ಪ್ರಾಚೇತಸ (ವಾಲ್ಮೀಕಿ)ರನ್ನು ನೆನೆದು, ತನ್ನ ಕೃತಿ—'ಸಿರಿಹರಿ ಭಕುತರ ಉಮ್ಮಹದ ಅಚ್ಚು, ಶಿವಸೇವಕರ ಮೆಚ್ಚು' ಆಗುವುದೆಂಬ ಆತ್ಮ ಪ್ರತ್ಯಯವನ್ನು ಪ್ರಕಟಿಸುತ್ತಾನೆ. ಶ್ರೀರಾಮನಾಮ ಮಹಿಮೆಯ ಅಗಾಧತೆಯನ್ನು ಕೊಂಡಾಡಿ, ಕವಿ ನಮ್ಮನ್ನು ಶಿವನ ನೆಲೆಯಾದ ಕೈಲಾಸಕ್ಕೆ ಕರೆದೊಯ್ಯುತ್ತಾನೆ. ಅಲ್ಲಿ ವಾಸುದೇವ ಸ್ತುತಿ ಪರಾಯಣೆಯಾದ ಗೌರಿಯು ತನ್ನ ಪತಿ ಮಹೇಶನೊಡನೆ—

ಕೇಶವಾದಿ ಸಹಸ್ರನಾಮ ವಿ
ಲಾಸದೊಳಗಧಿ ನಾಮಧೇಯದ
ಭಾಸುರಾನುಗ್ರಹ ರಹಸ್ಯವ ನರುಹಬೇಕೆಂದು

ಕೇಳಿಕೊಂಡಾಗ, ಸತಿಗೆ ರಾಮನಾಮವೆಂಬ ಬೀಜಾಕ್ಷರವನ್ನು ಅನುಗ್ರಹಿಸಿದ ಶಿವನು, ಮತ್ತೆ ಆಕೆಯ ಅಪೇಕ್ಷೆಯಂತೆ ಶ್ರೀರಾಮನ ದಿವ್ಯಕಥೆಯನ್ನು ವರ್ಣಿಸತೊಡಗುತ್ತಾನೆ. ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣಗಳನ್ನು ಅನುಸರಿಸಿ ಕವಿ

ಕುಮಾರ ವಾಲ್ಮೀಕಿ, ಶ್ರೀರಾಮನಾಮದ ಮಹಿಮೆಯನ್ನು ಪ್ರಸಾರಮಾಡುವ ಸದುದ್ದೇಶದಿಂದ, ಆದಿಕಾವ್ಯದಲ್ಲಿಲ್ಲದ— ಶಿವನು ಪಾರ್ವತಿಗೆ ರಾಮಚರಿತೆಯನ್ನು ಹೇಳುವ–ಸನ್ನಿವೇಶ ವನ್ನು ಕಲ್ಪಿಸಿಕೊಂಡಂತೆ ತೋರುತ್ತದೆ.

ವಾಲ್ಮೀಕಿಯು ನಾರದರೊಡನೆ ಜಗತ್ತಿನಲ್ಲಿ ಆದರ್ಶನಾದ ಮಾನವೋತ್ತಮನಿದ್ದರೆ ಅವನ ಕಥೆಯನ್ನು ತನಗೆ ತಿಳಿಸ ಬೇಕೆಂದು ಕೇಳಿಕೊಂಡ ಸನ್ನಿವೇಶವಾಗಲಿ, ನಾರದನು ಶ್ರೀರಾಮನ ಚರಿತ್ರೆಯನ್ನು ಸಂಗ್ರಹವಾಗಿ ವಾಲ್ಮೀಕಿಗೆ ಸೂಚಿಸಿದ ಪ್ರಕರಣವಾಗಲಿ ತೊರವೆ ರಾಮಾಯಣದಲ್ಲಿಲ್ಲ.

## ಬೇಡನು ಕವಿಯಾದ ಕಥೆ

ಇಂದು ಬಹಳ ಜನಪ್ರಿಯವಾಗಿರುವ, ಬೇಡನೊಬ್ಬನು ತಪಸ್ಸಿನಿಂದ ಕವಿಯಾದ ಕಥೆಯನ್ನು ಕನ್ನಡದಲ್ಲಿ ಮೊದಲು ಹೇಳಿದವನು ಕುಮಾರ ವಾಲ್ಮೀಕಿ. ಇದು ಆದಿ ಕಾವ್ಯದಲ್ಲಿ ಇಲ್ಲದ ಪ್ರಕರಣ. ತಪಸ್ಸಿನಿಂದ, ಸಾಧನೆಯಿಂದ ಶ್ರೀರಾಮ ನಾಮ ಮಹಿಮೆಯಿಂದ ದುರಾತ್ಮನೂ ಶಿಷ್ಟನಾಗಿ, ಮಹಾಕವಿ ಯಾಗಿ ರಾಮಾಯಣವನ್ನು ರಚಿಸುವುದು ಸಾಧ್ಯವಾಯಿತು ಎನ್ನುವುದನ್ನು ತಿಳಿಸುವುದು ಭಕ್ತಕವಿಯ ಸದುದ್ದೇಶವಿದ್ದಿರ ಬೇಕು.

## ಕುಶಲವ ಪ್ರಶ್ನೆ

ಸಿಂಹಾವಲೋಕನ ಕ್ರಮದಿಂದ ಶ್ರೀರಾಮ ಕಥೆಯನ್ನು ಸಂಗ್ರಹವಾಗಿ ಹೇಳಿ ವಾಲ್ಮೀಕಿಯ ಆಶ್ರಮದಲ್ಲಿ ಬೆಳೆಯುತ್ತಿದ್ದ ಲವಕುಶರು ಗುರು ವಾಲ್ಮೀಕಿಯೊಡನೆ—"ನಮ್ಮನ್ನ ಪಡೆದ

ತಂದೆ ಯಾರು? ಅನ್ವಯಯಾವುದು? ತಿಳಿಸಿ ಅನುಗ್ರಹಿಸಬೇಕು"—ಎಂದು ಪ್ರಾರ್ಥಿಸಿದಾಗ ವಾಲ್ಮೀಕಿಯು ಆ ಎಳೆಯರಿಗೆ ಶ್ರೀರಾಮನ ದಿವ್ಯಕಥೆಯನ್ನು ಹೇಳತೊಡಗಿದನೆಂದೂ ಕವಿ ಸೂಚಿಸುತ್ತಾನೆ. ಹೀಗಾಗಿ ವಾಲ್ಮೀಕಿ ಮುನಿ—ಲವಕುಶರಿಗೆ ಹೇಳಿದ ಕಥೆಯನ್ನೇ ಶಿವನು ಪಾರ್ವತಿಗೆ ಅನುಗ್ರಹಿಸಿದನೆಂದು ತಿಳಿಯಬೇಕಾಗುತ್ತದೆ.

## ದಶರಥ ವಂಶ ವರ್ಣನೆ

ಅಯೋಧ್ಯೆಯಲ್ಲಿ ಇಕ್ಷ್ವಾಕು ವಂಶದ ಅಜ ನೃಪಾಲನ ಸುಕುಮಾರ ದಶರಥನು ಮಹೀಪತಿಯಾಗಿ ರಾಜ್ಯಭಾರ ನಡೆಸುತಿದ್ದಾನೆ. ಇಕ್ಷ್ವಾಕು ವಂಶದ ಅರಸರ ಮಹಿಮೆಯನ್ನು ಎಷ್ಟು ವರ್ಣಿಸಿದರೂ ಕವಿಗೆ ತೃಪ್ತಿಯಿಲ್ಲ.

ಶಿಶುವುತನದಿ ಸಮಸ್ತ ವಿದ್ಯಾ
ವ್ಯಸನಿಗಳು ಯೌವನದೊಳನುಭವ
ವಿಷಯಿಗಳು ಮುಪ್ಪಿನಲಿ ಮುನಿಮಾರ್ಗಾನುವರ್ತಿಗಳು
ಆಸು ಪರಿತ್ಯಾಗದಲಿ ಯೋಗದ
ಬೆಸುಗೆಗಳನುಳ್ಳವರು ಕೇಳೈ
ಕುಶನೆ ನಿಮ್ಮನ್ವಯದ ರಾಯರು ಲವನೆ ಕೇಳೆಂದ

(ತೊ.ರಾ. I 3–19)

ಕವಿ ಹೀಗೆ ವರ್ಣಿಸುವಲ್ಲಿ, ಕಾಳಿದಾಸನ ರಘುವಂಶ (I-8)ದ ಶ್ಲೋಕವೊಂದು ನೆನಪಿಗೆ ಬರುವುದು ಸಹಜ—

ಶೈಶವೇ ಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಮ್
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇತನುತ್ಯಜಾಮ್

ತೊರವೆ ರಾಮಾಯಣವನ್ನು ಓದುತ್ತ ಮುಂದೆ ಸಾಗುತ್ತಿದ್ದಂತೆ—ಕವಿಯ ಬಹುಜ್ಞತೆ ಹೆಚ್ಚು ಹೆಚ್ಚು ವ್ಯಕ್ತವಾಗುತ್ತದೆ. ಆದಿಕಾವ್ಯವನ್ನು ಕುಮಾರ ವಾಲ್ಮೀಕಿ ಅನುಸರಿಸುವಂತೆ ಕಂಡು ಬರುತ್ತಿದ್ದರೂ—ಅವನಲ್ಲಿ ಅಧ್ಯಾತ್ಮ ರಾಮಾಯಣ, ಆನಂದ ರಾಮಾಯಣ 'ರಘುವಂಶ', ಮಧ್ವರ 'ಭಾರತ ತಾತ್ಪರ್ಯ ನಿರ್ಣಯ', ನಾಗಚಂದ್ರನ 'ಪಂಪರಾಮಾಯಣ' ಕುಮಾರ ವ್ಯಾಸನ 'ಗದುಗಿನ ಭಾರತ'—ಈ ಕೃತಿಗಳ ದಟ್ಟ ಪ್ರಭಾವ ಎದ್ದು ಕಾಣುತ್ತದೆ.

ಋಷ್ಯಶೃಂಗೋಪಾಖ್ಯಾನ, ಪುತ್ರಕಾಮ್ಯಾಧ್ವರ, ಶ್ರೀರಾಮ ಜನನ, ವಿಶ್ವಾಮಿತ್ರಗುರುತ್ವ, ಯಜ್ಞರಕ್ಷಣೆ—ಅಹಲ್ಯೋದ್ಧಾರ—ಸನ್ನಿವೇಶಗಳಲ್ಲಿ ಬಹುಮಟ್ಟಿಗೆ ಕವಿ ಆದಿಕಾವ್ಯದ ಕಥಾ ವಸ್ತುವನ್ನು ಅನುಸರಿಸಿದಂತಿದೆ.

## ಬಿಲ್ಲಡಿಯಲ್ಲಿ ಬಿದ್ದ ರಾವಣ

ಸೀತಾಸ್ವಯಂವರದ ವರ್ಣನೆಯನ್ನು ಕುಮಾರ ವಾಲ್ಮೀಕಿ ವಿಶೇಷ ರೀತಿಯಿಂದ ಮಾಡಿದ್ದಾನೆ. ವಾಲ್ಮೀಕಿಯ ಕಾವ್ಯದಲ್ಲಿ ಈ ರೀತಿಯ ಸ್ವಯಂವರದ ಉಲ್ಲೇಖವಿಲ್ಲ. ಅಲ್ಲಿ ಅನೇಕ ರಾಜರು ಆ ಮೊದಲೇ ಶಿವಧನುಸ್ಸಿಗೆ ಕೈಯೊಡ್ಡಿ ಸೋತಿದ್ದ ಹೇಳಿಕೆ ಮಾತ್ರ ಇದೆ. ಆದರೆ ತೊರವೆ ರಾಮಾಯಣದ ಕವಿಯು ಸೀತಾಮಾತೆಯ ವಿವಾಹ ಮಂಟಪದ ಸುಂದರ ಸನ್ನಿವೇಶವನ್ನು ಕಲ್ಪಿಸಿಕೊಂಡು ಅಲ್ಲಿಗೆ ಕನ್ಯಾಪೇಕ್ಷಿಯಾಗಿ ದಶಕಂಠ ರಾವಣನು ಬಂದಂತೆಯೂ, ಅಲ್ಲಿಯೇ ರಾಮ–ಲಕ್ಷ್ಮಣನಿಗೆ ರಾವಣನ ಪ್ರಥಮ ದರ್ಶನವಾದಂತೆಯೂ ಚಿತ್ರಿಸಿದ್ದಾನೆ. ಸೀತೆಯ ಸೌಂದರ್ಯಕ್ಕೆ ಮನಸೋತ ಲಂಕೇಶ್ವರನು ಆ ಹರ

ಧನುಸ್ಸನ್ನು ಎತ್ತಿ, ಮುರಿಯಲು ಪ್ರಯತ್ನಿಸಿದ ವರ್ಣನೆ ಹೀಗಿದೆ:

ಬಲಿದು ಮುಕುಟಾವಳಿಯು, ಶೋಣಿತ
ಪಳಿಯು ರಕ್ಕಸದೇಶಿಯಲಿ ಬಿಗಿ
ದೆಳವ ಹಾಪೆಯನೋಜೆಗೊಳಿಸಿಕ್ಕಲಿಸಿ ಪದಯುಗವ
ಅಳುಕದಂದು ಹರಾದ್ರಿಯನು ಕಿ
ತ್ತಿಳೆಯನಗಲಿಸುವಂತೆ ಬಾಹಾ
ಲುಳಿತ ಬಲನೆತ್ತಿದನು ನೆಲನೊಲದಾಡಲೆಡಬಲಕೆ

(ತೊ.ರಾ. I 15–19)

ಆದರೆ ದಶಕಂಠನ ಈ ಸಾಹಸ ಸಫಲವಾಗುವುದಿಲ್ಲ. ಕಬ್ಬಿನ ರಸಕ್ಕೆ ಆಸೆಪಟ್ಟು ಗರಗಸದಲ್ಲಿ ನಾಲಗೆ ಸಿಲುಕಿಸಿಕೊಂಡ ನರಿಯಂತಾಗುತ್ತದೆ ಅವನ ಅವಸ್ಥೆ. ಬಿಲ್ಲಡಿಯಲ್ಲಿ ಬಿದ್ದು ಒದ್ದಾಡುತ್ತಿದ್ದ ರಾವಣನನ್ನು ಅವನ ಕಡೆಯವರು ಹೇಗೋ ಮೇಲಕ್ಕೆ ಬ್ಬಿಸುತ್ತಾರೆ. ಆಗಲೇ ಆ ರಕ್ಕಸನು ಮನಸ್ಸಿನಲ್ಲೇ ಮುಂದೆ ಎಂದಾದರೂ ಸೀತೆಯನ್ನು ಕಳವಿನಿಂದ ಕೊಂಡೊಯ್ಯುವುದಾಗಿ ನಿರ್ಧರಿಸಿಕೊಂಡು, ಲಜ್ಜೆಯಿಂದ ತಲೆತಗ್ಗಿಸಿ ಲಂಕೆಗೆ ಮರಳುತ್ತಾನೆ. ಸೀತಾಪಹಾರದ ಸಂಕಲ್ಪವನ್ನು ರಾವಣನು ಇಲ್ಲೇ ಕೈಗೊಂಡಿರುವುದು ಇತರ ರಾಮಾಯಣಗಳಲ್ಲಿಲ್ಲ.

## ಮಾಯಾತರುಣಿ ಮಂಥರೆ

ಪಟ್ಟಾಭಿಷೇಕವನ್ನು ನಿಲ್ಲಿಸಿ, ಶ್ರೀರಾಮನನ್ನು ಕಾಡಿಗಟ್ಟಲು ಕಾರಣಳಾದ ಮಂಥರೆಯನ್ನು ಕುಮಾರ ವಾಲ್ಮೀಕಿಯು ಮಾಯೆಯ ಅವತಾರ ಎಂದು ಹೇಳಿದ್ದಾನೆ. ರಾಮನು ಸಿಂಹಾಸನವನ್ನೇರಿ ಅಯೋಧ್ಯೆಯಲ್ಲಿ ಉಳಿದರೆ ಅವನಿಂದ

ರಾವಣನ ವಧೆಯಾಗಲಾರದೆಂದು ತರ್ಕಿಸಿದ ಮಂಥರೆಯು ಕೈಕೇಯಿಗೆ ಪ್ರೇರಣೆಕೊಟ್ಟು ಎರಡು ವರಗಳನ್ನು ಕೇಳಿಸಿ— ರಾಮನನ್ನು ಕಾಡಿಗೆ ಅಟ್ಟಿಸುತ್ತಾಳೆ. ಶ್ರೀರಾಮನ ಅವತಾರ ಕಾರ್ಯಕ್ಕೆ ನೆರವಾದವಳೆಂಬ ಕಲ್ಪನೆಯಿಂದ ಮಂಥರೆಯ ಕುರಿತಾದ ನಮ್ಮ ತಿರಸ್ಕಾರ ಭಾವನೆ ಕಡಿಮೆಯಾಗುವುದಕ್ಕೆ ಇದರಿಂದ ಅವಕಾಶವೊದಗಿದೆ.

ಶ್ರೀರಾಮನು ತನ್ನ ಪಟ್ಟಾಭಿಷೇಕದ ಹಿಂದಿನ ರಾತ್ರಿ ವನವಾಸದ ಕನಸುಕಂಡಂತೆ ಹೇಳಿರುವುದು ಇಲ್ಲಿನ ಇನ್ನೊಂದು ಹೆಚ್ಚುಗಾರಿಕೆ. ವಸಿಷ್ಠನೊಡನೆ ರಾಮನು ತಿಳಿಸುವ ಈ ಸ್ವಪ್ನದ ಕಲ್ಪನೆಯಿಂದಾಗಿಯೂ ರಾಮನ ವನವಾಸವು ದೈವ ಯೋಜಿತವೆಂದು ಖಚಿತಪಡಿಸುವುದು ಕವಿಯ ಉದ್ದೇಶವಿರಬೇಕು.

## ತಾಂಡವ, ಶಂಬುಕ

ಬೇಟೆಯ ಸಂದರ್ಭದಲ್ಲಿ ದಶರಥನಿಂದ ಆಕಸ್ಮಿಕವಾಗಿ ಹತನಾದ ವೈಶ್ಯ ಮುನಿಕುಮಾರನನ್ನು ಕುಮಾರ ವಾಲ್ಮೀಕಿಯು ತಾಂಡವ ಎಂದು ಹೆಸರಿಟ್ಟು ಕರೆದಿದ್ದಾನೆ. ಈ ಹೆಸರು ವಾಲ್ಮೀಕಿ ರಾಮಾಯಣದಲ್ಲಿಲ್ಲ.

ಶೂರ್ಪನಖಿಗೆ ಶಂಬುಕನೆಂಬೊಬ್ಬ ಮಗನಿದ್ದನೆಂದೂ ಇಂದ್ರಪದವಿಗಾಗಿ ಅವನು ತಪಸ್ಸನ್ನು ನಡೆಸುತ್ತಿದ್ದನೆಂದೂ ಕುಮಾರ ವಾಲ್ಮೀಕಿ ಹೇಳುತ್ತಾನೆ. ಶಂಬುಕನ ತಪಸ್ಸಿನ ಉದ್ದೇಶವನ್ನು ತಿಳಿದ ದೇವೇಂದ್ರನು ಬೇಟೆಗಾರನ ವೇಷದಲ್ಲಿ ಆ ಅರಣ್ಯದಲ್ಲಿದ್ದ ರಾಮ ಲಕ್ಷ್ಮಣರಲ್ಲಿಗೆ ಬರುತ್ತಾನೆ. ಕಾಡುಮೃಗಗಳ ಪೀಡೆಯನ್ನು ನಿವಾರಿಸಬೇಕೆಂದು ಆ ಮಾಯಾ ಕಿರಾತನು (ಇಂದ್ರನು)

ಮೊರೆಯಿಟ್ಟಾಗ, ಲಕ್ಷ್ಮಣನು ಅಣ್ಣನ ಅಪ್ಪಣೆ ಪಡೆದು ಬೇಟೆಗೆ ಹೊರಡುತ್ತಾನೆ. ಬೇಟೆಯ ಪ್ರಸಂಗದಲ್ಲಿ ಇಂದ್ರನ ಮಾಯೆಯಿಂದ ಒಂದು ಹಂದಿಯು ಕಾಣಿಸಿಕೊಳ್ಳುತ್ತದೆ. ಆ ಹಂದಿಗೆ ಗುರಿಯಿಟ್ಟು ಎಸೆದ ಲಕ್ಷ್ಮಣನ ಬಾಣವು ಹುತ್ತದೊಳಗೆ ತಪಸ್ಸು ಮಾಡುತಿದ್ದ ಶಂಬುಕನ ತಲೆಯನ್ನು ಕತ್ತರಿಸುತ್ತದೆ. ತನ್ನಿಂದ ಮುನಿವಧೆ ನಡೆಯಿತಲ್ಲ ಎಂದು ಲಕ್ಷ್ಮಣನು ದುಃಖಿಸಿ, ಪ್ರಾಣತ್ಯಾಗ ಮಾಡುವುದೇ ಲೇಸೆಂದು ನಿರ್ಧರಿಸುತ್ತಾನೆ. ಆಗ ಇಂದ್ರನು ನಿಜರೂಪದಿಂದ ಕಾಣಿಸಿಕೊಂಡು, ನಾರದನೂ ಅಲ್ಲಿಗೆ ಆಗಮಿಸಿ, ಸತ್ತವನು ರಾಕ್ಷಸ, ಋಷಿಯಲ್ಲ, ಅವನಿಗೆ ಮನುಷ್ಯರಿಂದ ಮಾತ್ರ ಮರಣವೆಂದಿದ್ದುದರಿಂದ ಆ ಬೇಟೆಯ ನಾಟಕ ಹೂಡಬೇಕಾಯಿತು ಎಂದು ಲಕ್ಷ್ಮಣನನ್ನು ಸಂತೈಸಿದಾಗ, ಲಕ್ಷ್ಮಣನು ಸಮಾಧಾನ ಹೊಂದಿ ಅಣ್ಣನಲ್ಲಿಗೆ ಮರಳುತ್ತಾನೆ.

ಸತ್ತುಬಿದ್ದ ಮಗನನ್ನು ಕಂಡು ಶೂರ್ಪನಖಿ ಸಿಟ್ಟಿನಿಂದ ಕಿಡಿಕಿಡಿಯಾಗುತ್ತಾಳೆ. ತನ್ನ ಪುತ್ರನ ವಧೆ ನಡೆಸಿದವರಾರೆಂದು ಅರಸುತ್ತಾ ಅವಳು ಬರುತ್ತಿರಲು ರಾಮಲಕ್ಷ್ಮಣರನ್ನು ಕಾಣುತ್ತಾಳೆ. ರಾಮನ ಸೌಂದರ್ಯವು ಅವಳಿಗೆ ಮರಳುಹಿಡಿಸುತ್ತದೆ. ಮಗನು ಸತ್ತ ದುಃಖವೂ, ಕೊಲೆಯ ಸೇಡಿನ ಮನೋಭಾವವೂ ಮರೆಯಾಗುತ್ತದೆ. ತನ್ನ ವಿಕಾರವಾದ—ರಾಕ್ಷಸ ರೂಪವನ್ನು ಅದೃಶ್ಯಗೊಳಿಸಿ, ಚೆಲುವೆಯಾಗಿ ಶ್ರೀರಾಮನ ಮನಸ್ಸನ್ನು ಸೆಳೆಯುವ ಪ್ರಯತ್ನ ಮಾಡುತ್ತಾಳೆ. ಆದರೆ ಅವಳು ತನ್ನ ಉದ್ದೇಶದಲ್ಲಿ ಸಫಲಳಾಗದೆ—ಮೂಗು, ಕಿವಿಗಳನ್ನು ಕಳೆದುಕೊಂಡ ಕಥೆಯು ಮಾತ್ರ ವಾಲ್ಮೀಕಿ ರಾಮಾಯಣದಲ್ಲಿದ್ದಂತೆ ಇಲ್ಲೂ ಇದೆ.

ವಾಲ್ಮೀಕಿ ರಾಮಾಯಣದಲ್ಲಿಲ್ಲದ ಕುಮಾರ ವಾಲ್ಮೀಕಿಯು ಹೇಳಿದ ಶಂಬುಕನ ವೃತ್ತಾಂತಕ್ಕೆ ಯಾವುದು ಆಧಾರವೋ ತಿಳಿಯದು. ಜೈನ ರಾಮಾಯಣದಿಂದ ಈ ಪ್ರಸಂಗವನ್ನು ಉದ್ಧರಿಸಿಕೊಂಡು ತನ್ನದೇ ರೀತಿಯಲ್ಲಿ ಕವಿಯು ಕಲ್ಪನೆಯನ್ನು ಮೆರೆದಿರಬಹುದು. ಈ ಶಂಬುಕ ವಧೆಯು ಶೂರ್ಪನಖಿಯ ಮೂಲಕ ರಾವಣವಧೆಗೆ ಬೀಜರೂಪವಾಗಿ ಪರಿಣಮಿಸುವುದು ತೊರವೆ ರಾಮಾಯಣದಲ್ಲಿನ ಕಥಾಸಂವಿಧಾನದ ವೈಶಿಷ್ಟ್ಯ ವೆನಿಸುತ್ತದೆ.

ಕಥೆ ಮುಂದೆ ಸಾಗುತ್ತಿದ್ದಂತೆ ಶೂರ್ಪನಖಿಯ ನಾಸಾಚ್ಛೇದ ಹಾಗೂ ಖರ, ದೂಷಣ, ತ್ರಿಶಿರ ಮತ್ತು ಅಸಂಖ್ಯದಾನವರ ವಧೆ ಶ್ರೀರಾಮನಿಂದ ನಡೆಯುತ್ತದೆ. ಶೂರ್ಪನಖಿಯು ಖರಾ ಸುರನ 'ಹೇಸಿಕೆ ಹೊನಲಿಡುವ ಹಂದಲೆಯನ್ನು' ಹಿಡಿದು ಕೊಂಡು ಲಂಕೆಗೆ ಧಾವಿಸುತ್ತಾಳೆ. ಸೀತೆಯ ಸೌಂದರ್ಯಾತಿ ಶಯವನ್ನು ಬಲುಬಗೆಯಾಗಿ ವರ್ಣಿಸುತ್ತಾ ರಾವಣನ ಹೃದಯ ದಲ್ಲಿ ಸ್ಮರಶರಗಳು ನಾಟುವಂತೆ ಮಾಡುವಲ್ಲಿ ಯಶಸ್ವಿಯಾಗು ತ್ತಾಳೆ. ರಾಮಲಕ್ಷ್ಮಣರು ನರರಾದರೂ ದುರ್ಬಲರಲ್ಲ, ನೇರ ವಾಗಿ ಸೀತೆಯನ್ನು ವಶೀಕರಿಸುವುದು ಅಸಾಧ್ಯ. ಮಾವ ಮಾರೀಚನ ನೆರವು ಪಡೆದು ವಂಚನೆಯ ಮಾರ್ಗದಿಂದಲೇ ಆಕೆಯನ್ನು ಪಡೆಯಬೇಕಾಗುತ್ತದೆ—ಎಂದು ತನ್ನಣ್ಣನಿಗೆ ಶೂರ್ಪನಖಿ ಕಿವಿಮಾತು ಹೇಳಲು ಮರೆಯುವುದಿಲ್ಲ.

## ಮಾರೀಚ–ಮೃಗ

ಜಪಸಮಾಧಿಯಲ್ಲಿದ್ದ ಮಾರೀಚನಿಗೆ ತನ್ನೆಡೆಗೆ ಬಂದ ರಾವಣನ ದುರುದ್ದೇಶ ತಿಳಿಯಿತು. 'ನಿಶಾಟ ಪ್ರಕಟ ವಂಶಾ

ರಣ್ಯದಲಿ ಪಾವಕನ ಪಸರಿಸಬೇಡ, ಪೌಲಸ್ತ್ಯ ವಂಶದ ಮೆರೆವ ಜವ್ವನ ಜಾಣ ವನಿತೆಯು ತುರುಬ ಬೋಳಿಸಬೇಡ, ರಾಮನಲಿ ವೈರಬೇಡ' ಎಂದು ಮಾರೀಚನು ಎಷ್ಟೇ ಎಚ್ಚರಿಸಿದರೂ, ಕಾಮಾಂಧನಾದ ರಾವಣನು ಕತ್ತಿ ಹಿರಿದು ಮಾವನನ್ನು ಕೊಲ್ಲುವುದಾಗಿ ಬೆದರಿಸುತ್ತಾನೆ. ಆಗ ಉಪಾಯಗಾಣದೆ—ಅಸುರಾರಿಗೆ ಅಸುವನ್ನು ಸಮರ್ಪಿಸುವೆನೆಂದು ನಿರ್ಧರಿಸಿಕೊಂಡು ಮಾರೀಚನು ಹೊಮ್ಮರಿಯ ರೂಪವನ್ನು ತಾಳಬೇಕಾಗುತ್ತದೆ.

ಹೊಳೆ ಹೊಳೆವ ಕಿರುಗೊಳಗುಗಳ ಥಳ
ಥಳಿಪ ವದನದ ತರಳನಯನದ
ಮಿಳಿರ್ವ ಕಿವಿಗಳ ಮಿಡಕುವಳ್ಳೆಯ ಮಿರುಪ ನಾಸಿಕದ
ಚಳಗತಿಯ ನಿರ್ಮಾಂಸ ಜಂಘೆಯ
ಲುಳಿಯಲಾಗಿನ ಲಂಘನೆಯುಲ
ವ್ವಳಿಪ ಹೊಸ ಜವ್ವನದ ಹೊಮ್ಮರಿ ಹೊಳಕಿತಿದಿರಿನಲಿ

(ತೊ.ರಾ, III 8–15)

ಸೀತೆಯ ಬಯಕೆಯಂತೆ ಆ ಹೊನ್ನ ಜಿಂಕೆಯನ್ನು ಹಿಡಿಯಲು ಹೊರಟ ಶ್ರೀರಾಮ ಅದನ್ನು ಬಹಳವಾಗಿ ಹಿಂಬಾಲಿಸಿ, ಬಳಲಿ ಕೊನೆಗೆ ಬಾಣವೆಸೆದಾಗ ರಾವಣನಿಗೆ ಸನ್ನೆಯೆಂಬಂತೆ 'ಹಾ, ಸುಮಿತ್ರಾಸೂನು, ಹಾ! ಸೀತಾ ಸರೋರುಹಾನನೆ' ಎಂದು ರಾಮನ ಧ್ವನಿಯನ್ನನುಕರಿಸಿ ಕೂಗುತ್ತ ಮಾರೀಚನು ಇಳೆಗೊರಗುತ್ತಾನೆ. ಈ ಸಂದರ್ಭದಲ್ಲಿ, ಸುಗ್ರೀವನನ್ನು ವಂಚಿಸುವುದಕ್ಕಾಗಿ ವಾಲಿಯ ಸ್ವರವನ್ನನುಸರಿಸಿ ಮಾಯಾವಿ ಎಂಬ ರಾಕ್ಷಸನು ಬಿಲದೊಳಗೆ—ತಾನು ವಾಲಿಯಿಂದ ಹತನಾಗುತ್ತ 'ಹಾ ಸುಗ್ರೀವ!' ಎಂದು ಆರ್ತಧ್ವನಿಯೆಬ್ಬಿಸಿದ್ದು ನೆನಪಾಗುವುದು ಸಹಜ.

## ಸೀತೆಗಾಗಿ ಹುಡುಕಾಟ—ಲಂಕೆಯ ಚೆಲ್ಲಾಟ

ಹೀಗೆ ಹತ್ತು ಹಲವು ಸನ್ನಿವೇಶಗಳಲ್ಲಿ ಕುಮಾರ ವಾಲ್ಮೀಕಿ ತನ್ನದೇ ಆದ ರೀತಿಯಲ್ಲಿ ಕಥೆಯನ್ನು ಬೆಳೆಸಿಕೊಂಡು ಸ್ವೋಪಜ್ಞತೆಯನ್ನು ಮೆರೆದಿದ್ದಾನೆ. ತೊರವೆ ರಾಮಾಯಣದಲ್ಲಿನ ಎಲ್ಲ ಕಥಾವೈಶಿಷ್ಟ್ಯಗಳನ್ನು ಇಲ್ಲಿ ಉಲ್ಲೇಖಿಸುವುದಕ್ಕೆ ಅವಕಾಶವಿಲ್ಲ. ರಾವಣನು ಸನ್ಯಾಸಿ ವೇಷಧರಿಸಿ ಎಲೆಮನೆಗೆ ಬಂದಾಗ ಅವನಿಗೆ ಕಾಣಿಸಿದ್ದು ನಿಜಸೀತೆಯಲ್ಲ, ಮಾಯಾಮಹೀಸುತೆ—ಎಂದಿದ್ದಾನೆ ಕುಮಾರ ವಾಲ್ಮೀಕಿ. 'ಮಾಯಾ ಮಹೀಸುತೆ' ಎಂಬಲ್ಲಿ ಮಹಿಳಾ ಶಿರೋಮಣಿ—ಎಂಬ ಪಾಠಾಂತರವೂ ದೊರೆಯುತ್ತದೆ. ಮುಂದೆ ಎಲ್ಲಿಯೂ ಮಾಯಾಸೀತೆಯ ಪ್ರಸ್ತಾವವಿಲ್ಲವೆನ್ನುವುದೂ ಗಮನಾರ್ಹ. ಭಕ್ತಿಯುಗದ ಹಲವು ಪುರಾಣ-ಕಾವ್ಯಗಳಲ್ಲಿ ರಾವಣನು ಕದ್ದೊಯ್ದುದು ನಿಜ ಸೀತೆಯನ್ನಲ್ಲ, ಮಾಯಾಸೀತೆಯನ್ನು ಎಂಬಂತಹ ವರ್ಣನೆಗಳಿವೆ. ಆದರೆ ತೊರವೆ ರಾಮಾಯಣದಲ್ಲಿ ರಾವಣವಧೆಯಾದ ಮೇಲೆ—ಆ ಪುರಾಣಕೃತಿಗಳಲ್ಲಿರುವಂತೆ ನಿಜಸೀತೆಯು ಪ್ರತ್ಯಕ್ಷಳಾದ ಘಟನೆಯು ವರ್ಣಿತವಾಗಿಲ್ಲದಿರುವುದರಿಂದ, 'ಮಾಯಾಸೀತಾ ಅಪಹರಣ ವೃತ್ತಾಂತ'ವು ಕುಮಾರ ವಾಲ್ಮೀಕಿಕೃತವಲ್ಲ, ಆ ಮೇಲಿನ ಪ್ರಕ್ಷಿಪ್ತ ಭಾಗವಿರಬೇಕು—ಎಂದು ತರ್ಕಿಸುವುದು ಸರಿಯಾದೀತು.

ಹಾಗೆಯೇ ಶೂರ್ಪನಖಿಗೆ ಅಯೋಮುಖಿಯೆಂಬೊಬ್ಬಳು ಮಗಳಿದ್ದು, ಆಕೆಯೂ ರಾಮಲಕ್ಷ್ಮಣರನ್ನೆದುರಿಸಿ, ತನ್ನ ತಾಯಿಯಂತೆಯೇ ಕಿವಿ, ಮೂಗುಗಳನ್ನು ಕಳೆದುಕೊಂಡು ಕಣ್ಮರೆಯಾಗುತ್ತಾಳೆ. ವಾಲ್ಮೀಕಿ ರಾಮಾಯಣದ ದಾಕ್ಷಿಣಾತ್ಯ ಪಾಠದಲ್ಲಿ ಮಾತ್ರ ಸಿಗುವ ಅಯೋಮುಖಿಯ ವೃತ್ತಾಂತವನ್ನು

ಕುಮಾರ ವಾಲ್ಮೀಕಿಯೂ ತನ್ನ ಕೃತಿಯಲ್ಲಿ ಹೀಗೆ ಸೇರಿಸಿರಬಹುದು.

ಸೀತೆಯನ್ನರಸುತ್ತಾ ಹೊರಟ ಕಪಿಗಳಲ್ಲಿ ಕೆಲವರು ಅಯೋಧ್ಯೆಯ ಭರತನಲ್ಲಿಗೂ ಹೋಗುತ್ತಾರೆ. ತನ್ನಲ್ಲಿಗೆ ಬಂದವರಿಂದ ಅಣ್ಣನಿಗೆ ಬಂದ ಆಪತ್ತನ್ನು ತಿಳಿದ ಭರತನು ರಾಮನ ಸಹಾಯಕ್ಕಾಗಿ ಸೇನೆಯನ್ನು ಸಿದ್ಧಗೊಳಿಸಲು ಮುಂದಾಗುತ್ತಾನೆ. ಅಷ್ಟರಲ್ಲಿ ನಾರದನು ಆಕಾಶದಿಂದಿಳಿದು ಭರತನ ಕಿವಿಯಲ್ಲಿ "ಶ್ರೀರಾಮನು ರಾವಣವಧೆಗಾಗಿಯೇ ಅವತರಿಸಿದವನು. ಅವನಿಗೆ ನಿನ್ನ ಸಹಾಯ ಬೇಕಿಲ್ಲ' ಎಂಬ ರಹಸ್ಯವನ್ನು ತಿಳಿಸಿದಾಗ ಭರತನಿಗೆ ಸಮಾಧಾನವಾಗುತ್ತದೆ.

### ತೃಣಬಿಂದು–ಪ್ರಕರಣ

ಹನುಮಂತನು ಮಹೇಂದ್ರಗಿರಿಯನ್ನೇರಿ ಲಂಕೆಯತ್ತ ಸಮುದ್ರೋಲ್ಲಂಘನೆ ಮಾಡುತ್ತಾನಷ್ಟೆ. ಉಕ್ಕುವ ಅತಿಶಯವಾದ ವೀರರಸಾಧಿಕ್ಯದಿಂದ ಮಾರುತಿಯು ಲಂಕೆಯನ್ನು ಎಡಕ್ಕಿಕ್ಕಿ—ಲಂಕೆಯನ್ನು ಉಲ್ಲಂಘಿಸಿ ಏಳುನೂರು ಯೋಜನ ಮುಂದಕ್ಕೆ ಹಾರಿ, ಅಲ್ಲಿ ತೃಣಬಿಂದು ಮುನಿಯನ್ನು ಕಂಡು ಅವನಿಗೆ ತನ್ನ ಸತ್ವಾತಿಶಯವನ್ನು ಪ್ರತ್ಯಕ್ಷೀಕರಿಸಿ ಆ ಮುನಿಯಿಂದ ದಿಕ್‌ದರ್ಶನ ಪಡೆದು, ಹೋದ ದಾರಿಯಲ್ಲಿ ಹಿಂದೆ ನೆಗೆದು ಲಂಕಾಪುರ ಪ್ರವೇಶ ಮಾಡಿದಂತೆ ಕುಮಾರ ವಾಲ್ಮೀಕಿ ವರ್ಣಿಸಿದ್ದಾನೆ. ಆನಂದ ರಾಮಾಯಣವನ್ನನುಸರಿಸಿ, ಸ್ವಲ್ಪ ಕಥಾ ವ್ಯತ್ಯಾಸ ಮಾಡಿಕೊಂಡು, ಹನುಮಂತನ ಸಾಹಸಾತಿಶಯದ ಪ್ರದರ್ಶನಕ್ಕಾಗಿ, ತೃಣಬಿಂದು ಮುನಿಯ ಪ್ರಕರಣವನ್ನು ಕನ್ನಡದ ಕವಿ ನಿಯೋಜಿಸಿಕೊಂಡಂತೆ ತೋರುತ್ತದೆ.

## ಕುಂಭಕರ್ಣನ ನಿದ್ರಾ-ದರ್ಶನ

ಹನುಮಂತನು ಲಂಕೆಯಲ್ಲಿ ಅಣುರೂಪಧಾರಿಯಾಗಿ ಸೀತೆಗಾಗಿ ನಡೆಸಿದ ಹುಡುಕಾಟದ ವರ್ಣನೆಯಂತೂ ತೊರವೆ ರಾಮಾಯಣದಲ್ಲಿ ವಿಸ್ತಾರವಾಗಿ ಹರಿದಿದೆ. ಕುಂಭಕರ್ಣನ ಮಂದಿರವನ್ನು ಪ್ರವೇಶಿಸಿದಾಗ ಮಾರುತಿ ಕಂಡ ದೃಶ್ಯ ಹೀಗಿದೆ:

ಎರಡು ಯೋಜನ ದಾಯತದ ಪರಿ
ಸರದ ಮಣಿ ಪರಿಯಂಕದಲಿ ತ
ನ್ನೆರಡು ದೆಸೆಯಲಿ ತನ್ನ ತೂಕದ ಘೋರ ಯುವತಿಯರ
ಕರದ ತಲೆಗಿಂಬಿನಲಿ ನಿದ್ರೆಯ
ಭರದಲಿರ್ದನು ನೀಲಗಿರಿಯನು
ಸರಸಿಜೋದ್ಭವ ತಡೆದು ಕೆಡಹಿದ ತೆರದಲಸುರೇಂದ್ರ

(ತೊ.ರಾ. V 2–38)

ನೀಲಗಿರಿಯನ್ನು ಕಡಿದು ಕೆಡಹಿದಂತೆ ಕುಂಭಕರ್ಣನು ಎರಡು ಯೋಜನ ಉದ್ದದ ಮಂಚದ ಮೇಲೆ ಗಾಢನಿದ್ದೆಯಲ್ಲಿದ್ದಾನೆ. ಮಹಾಶೇಷನ ಬುಸುಗುಟ್ಟುವಿಕೆಯಂತೆ, ಬಿರುಗಾಳಿಯ ಬೀಸುವಿಕೆಯಂತೆ, ಪ್ರಲಯ ಕಾಲದಲ್ಲಿ ಭೂಮಿಯನ್ನು ಮುಳುಗಿಸುವ ಲಯಸಾಗರದ ಮೊರೆತದಂತೆ—ಅವನ ಉಸಿರಾಟದ ಸದ್ದು, ವೇಗ! ಅವನು ಮಲಗಿದ್ದ ಮಣಿ ಮಂಚದ ಬಳಿಗೆ ಮೆಲ್ಲನೆ ಹನುಮಂತನು ಸಾಗಿದ್ದೇ—ಆ ರಕ್ಕಸನ ಉಚ್ಛ್ವಾಸದ ರಭಸಕ್ಕೆ ಸೆಳೆಯಲ್ಪಡುತ್ತಾನೆ. ಹಾಗೆ ಸೆಳೆಯಲ್ಪಟ್ಟ ಮಾರುತಿಯು ಕುಂಭಕರ್ಣನ ಮೂಗಿನ, ಕಶ್ಮಲದ ಶ್ಲೇಷ್ಮ ಶರಧಿಯಲ್ಲಿ ಮುಳುಗಿ ತಡಕಾಡಬೇಕಾಗುತ್ತದೆ. ಅಲ್ಲಿಂದ ಅವನಿಗೆ ಹೊರ ಬರಲೂ ಸಾಧ್ಯವಿಲ್ಲ. ಹನುಮಂತನು ಸಿಟ್ಟಿನಿಂದ ಕಿಡಿಕಿಡಿಯಾಗಿ ರಕ್ಕಸನ ಮೂಗಿನೊಳಗೇ ಇದ್ದುಕೊಂಡು, ತನ್ನ ಗಾತ್ರವನ್ನು ಹಿಗ್ಗಿಸು

ತ್ತಾನೆ. ಆಗ ಮೂಗಿಗೆ ಕೀಲು ಕೊಟ್ಟಂತಾಗಿ, ಕುಂಭಕರ್ಣನಿಗೆ ಉಸಿರಾಡಲು ಕಷ್ಟವಾಗುತ್ತದೆ. ಒಡನೆ ಅವನು ಭಯಂಕರವಾಗಿ ಸೀನುತ್ತಾನೆ. ಆ ರಕ್ಕಸನು ಸೀತ ರಭಸಕ್ಕೆ ಹನುಮಂತನು ಉಲ್ಕಾಪಾತವಾದಂತೆ ಅವನ ಮೂಗಿನಿಂದ ಹೊರಚಿಮ್ಮಿಸಲ್ಪಟ್ಟು ಎದುರಿಗಿದ್ದ ವಜ್ರಸ್ತಂಭಕ್ಕೆ ಬಂದೆರಗುತ್ತಾನೆ. ಹಾಗೆ ತಾಗಿದ ನೋವಿಗೆ ಹನುಮಂತನೂ 'ಅಯ್ಯೋ!' ಎಂದು ಚೀರಿ ತತ್ತರಿಸಬೇಕಾಗುತ್ತದೆ.

ಸಿಟ್ಟಿನಿಂದ ಕುಂಭಕರ್ಣನನ್ನು ಕೊಲ್ಲುವುದಕ್ಕಾಗಿ ಆಂಜನೇಯನು ತನ್ನ ತೋಳನ್ನೊಮ್ಮೆ ಮೇಲಕ್ಕೆತ್ತಿದರೂ, 'ಛೆ! ನಾನು ಇವನನ್ನು ಕೊಂದರೆ ಮುಂದೆ ಶ್ರೀರಾಮನು ಯುದ್ಧಕ್ಕೆ ಬಂದಾಗ ಅವನಿಗೆ ದೇಹವನ್ನೊಪ್ಪಿಸಲು ಯಾರಿದ್ದಾರೆ?' ಎಂದು ಯೋಚಿಸಿ — ತಾಳ್ಮೆತಂದುಕೊಂಡು ಅಲ್ಲಿಂದ ಮೆಲ್ಲಗೆ ಹೊರನಡೆಯುತ್ತಾನೆ.

ಲಂಕಾದಹನದ ವರ್ಣನೆಯು ಕುಮಾರ ವಾಲ್ಮೀಕಿಯ ಕಾವ್ಯಪ್ರತಿಭೆಗೆ ಉತ್ತಮ ನಿದರ್ಶನವಾಗಿದೆ. ಕವಿಯು ತನ್ನ ಕಾಲದಲ್ಲಿ ಯಾವುದೋ ಮಹಾನಗರವು ಬೆಂಕಿಗೆ ಆಹುತಿಯಾದುದನ್ನು ಕಂಡಿರಬೇಕು, ಅದನ್ನೆ ಈ ಭಾಗದಲ್ಲಿ ವರ್ಣಿಸಿರಬೇಕು—ಎನಿಸುವಂತಿದೆ.

## ಹನುಮಂತನ ಬಾಲ

ರಾವಣನ ಸಭೆಯಲ್ಲಿ, ಬಂಧಿತನಾದ ಹನುಮಂತನ ಬಾಲ ಬೆಳೆಯುತ್ತಲೇ ಇರುತ್ತದೆ. ಅದಕ್ಕೆ ಬಟ್ಟೆ ಸುತ್ತಿ, ಸುತ್ತಿ ಲಂಕಾನಗರದ ಬಟ್ಟೆಯ ಅಂಗಡಿಗಳೆಲ್ಲವೂ ಬರಿದಾಗುತ್ತವೆ. ಬಾಲಕ್ಕೆ ಎಣ್ಣೆ ಸುರಿದು, ಸುರಿದು ಎಣ್ಣೆಯ ಅಂಗಡಿಗಳೂ ಬರಿ

ದಾಗಿ, ಊರ ಮನೆ ಮನೆಗಳಿಂದಲೂ ಸೀರೆ, ಎಣ್ಣೆಗಳನ್ನು ಸುರಿದು ತರಲು ರಾವಣನು ಆಜ್ಞಾಪಿಸಿದ್ದನ್ನು ಕೇಳಿ, ಹನುಮಂತನು ಮುಂದಿನ ಅನಾಹುತವನ್ನು ಅರಿತು, ತನ್ನ ಬಾಲದ ಬೆಳವಣಿಗೆ ನಿಲ್ಲಿಸುತ್ತಾನೆ.

ತನ್ನ ಬಾಲಕ್ಕೆ ರಾವಣೇಶ್ವರನು ಬೆಲೆಬಾಳುವ ಬಟ್ಟೆಗಳನ್ನೆಲ್ಲಾ ಹೊದಿಸಿ, ಎಣ್ಣೆಸುರಿಸಿ ಮಾಡಿದ ಅಲಂಕಾರವನ್ನು ಕಂಡು ಹನುಮಂತನಿಗೆ ನಗು ಉಕ್ಕುತ್ತದೆ. ತನ್ನ ಬಾಲದ ಭಾಗ್ಯ ಎಷ್ಟು ವಿಶೇಷವಾದದ್ದು! ತಾನಾದರೋ ಕೌಪೀನ ಭಾಗ್ಯವನ್ನು ಮಾತ್ರ ಪಡೆದವನು—ಆದರೆ ಯಾವುದೋ ಪೂರ್ವಜನ್ಮದ ಪುಣ್ಯದಿಂದ ತನ್ನ ಬಾಲ ಇಂತಹ ಅಪೂರ್ವ ಅಲಂಕಾರಗಳನ್ನು ಪಡೆಯುವ ಅದೃಷ್ಟವನ್ನು ಹೊಂದಿರಬೇಕು —ಎನ್ನುತ್ತಾನೆ ಹನುಮ.

ಕಟ್ಟಿದೀ ಕೌಪೀನ ಕಮಲಜ
ತೊಟ್ಟ ನಿನಿತಕೆ ಪೂರ್ವ ಭವದಲಿ
ಕೊಟ್ಟು ಹುಟ್ಟಿದುದಿಲ್ಲವಾಗಿ ನಿದಾನವಿದು ನಮಗೆ
ನೆಟ್ಟ ನಾದಿಯಲಾವ ಸುಕೃತವ
ಮುಟ್ಟಿ ನೀ ಮಾಡಿದೆಯೋ ನಿನ್ನವೊ
ಲುಟ್ಟು ಮೆರೆದವರಾರು ಸಾಕಿನ್ನಥಟುತನವೆಂದ

(ತೊ.ರಾ. V 8–25)

ತನ್ನ ಬಾಲಕ್ಕೆ ಕಿಚ್ಚಿಕ್ಕಿದೊಡನೆ ಹನುಮಂತನು ರಾವಣನ ಹತ್ತುಮುಖಗಳ ಗಡ್ಡದ ಗುಡ್ಡಗಳಿಗೇ ಮೊದಲು ಬೆಂಕಿ ತಾಗಿಸುತ್ತಾನೆ. ಗಡ್ಡ ಸುಟ್ಟುಕೊಂಡು ರಾವಣನ ಪಾಡು ಹೇಳತೀರದು. ತನ್ನ ಅಂತಃಪುರದ ಸ್ತ್ರೀಯರನ್ನೆಲ್ಲ ಪುಷ್ಪಕ ವಿಮಾನದಲ್ಲಿರಿಸಿಕೊಂಡು ಅವನು ಆಕಾಶಕ್ಕೆ ನೆಗೆಯುತ್ತಾನೆ.

ಲಂಕಾನಗರವೆಲ್ಲ ಸುಟ್ಟು ಬೂದಿಯಾದರೂ ವೈಷ್ಣವನಾದ ವಿಭೀಷಣನ ಅರಮನೆಯು ಸುತ್ತಗೆರೆಯೆಳೆದು ಯಾವ ಹಾನಿಯೂ ಆಗದಂತೆ ಎಚ್ಚರವಹಿಸುತ್ತಾನೆ—ಹನುಮಂತ. ಹನುಮಂತನು ನಡೆಸಿದ ಲಂಕಾದಹನವನ್ನು ಕುಮಾರ ವಾಲ್ಮೀಕಿಯು ಒಂದು ಯಜ್ಞಕ್ಕೆ ಹೋಲಿಸಿ ಹೀಗೆನ್ನುತ್ತಾನೆ—

ಕುಶನೆ ಕೇಳೈ ಯೂಪವಾದುದು
ಬಿಸರುಹಾಕ್ಷನ ಕೀರ್ತಿತರು, ರಾ
ಕ್ಷಸಪುರ ತ್ರೇತಾಗ್ನಿ ಕುಂಡಗಳಾದವವನಿಜೆಯ
ವಿಷಮ ವಿಹ್ವಲ ಶೋಕಶಿಖಿ ಶೋ
ಭಿಸುವ ಹುತವಹನಾದನಸುರರು
ಪಶುಗಳಾದರು ಯಜ್ಞ ದೀಕ್ಷಿತನುದನಾಹನುಮ

(ತೊ.ರಾ. V 8–83)

ಲಂಕಾಯಜ್ಞದಲ್ಲಿ ಶ್ರೀರಾಮನ ಕೀರ್ತಿಯೇ ಯೂಪಸ್ತಂಭ, ಲಂಕಾಪುರವೇ ಅಗ್ನಿ ಕುಂಡ ಸೀತೆಯ ದುಃಖಜ್ವಾಲೆಯೇ ಬೆಂಕಿ ರಕ್ಕಸರೇ ಆಹುತಿಗೊಂಡ ಪಶುಗಳು. ಹನುಮಂತನೇ ಯಜ್ಞ ದೀಕ್ಷಿತ.

## ಬಾಲಕ್ಕೆ ಕಟ್ಟುಬಿದ್ದ ರಾವಣ

ಸೇತುಬಂಧನವಾಗಿ, ಅಂಗದ ಸಂಧಾನವೂ ವ್ಯರ್ಥವಾಗಿ ರಾಮರಾವಣರೊಳಗಿನ ಯುದ್ಧ 'ಮುನ್ನಿಲ್ಲ, ಇನ್ನಿಲ್ಲ' ಎಂಬಂತೆ ನಡೆಯುತ್ತದೆ. ಕುಮಾರ ವಾಲ್ಮೀಕಿಯ ಕಪಿವೀರರು ನಡೆಸಿದ ಮಹಾರಣವನ್ನು ವಿಶೇಷವಾಗಿ ವರ್ಣಿಸಿದ್ದಾನೆ. ರಾಮ ರಾವಣರ ಕಾಳಗದಲ್ಲಿ ವಾನರ ವೀರನಾದ ನೀಲನು ಪ್ರದರ್ಶಿಸಿದ ಶೌರ್ಯ ಸಾಹಸ ಅದ್ಭುತ. ನೀಲನು ಅಗ್ನಿಯ ಕುಮಾರ. ಕಪಿಸೇನೆಯ ದಂಡನಾಯಕ. ಯುದ್ಧ ಮಧ್ಯದಲ್ಲಿ ಒಮ್ಮೆ

ಇವನು 'ಗಿಡುಗನುಗಿಳಿಗೆ ಹಾಯ್ವಂದದಲಿ' ದಶಾನನ ಮೇಲೆ ಬೀಳುತ್ತಾನೆ ಆ ರಕ್ಕಸನನ್ನು ತನ್ನ ಬಾಲದಲ್ಲಿ ಬಿಗಿದು ಕಟ್ಟಿ— ತಾನು ಗಗನದ ಎತ್ತರಕ್ಕೂ ಬೆಳೆಯುತ್ತಾನೆ. ಆ ಮೇಲೆ ತನ್ನ ಬಾಲದ ತುದಿಯಲ್ಲಿ ಕಟ್ಟಲ್ಪಟ್ಟು ಜೋಲಾಡುತ್ತಿದ್ದ ರಾವಣ ನನ್ನು ನೀಲನು ಜೋಗುಳ ಹಾಡಿ ತೂಗುತ್ತಾನೆ.

ಅಳದಿರೆನ್ನಯ ಕಂದ ಜೋ ಮ
ಕ್ಕಳ ಮಹಾ ಮಾಣಿಕವೆ ಜೋ ಮೂ
ಗಳಿದವಳ ಕಡುಮುದ್ದ ಸಿತಗರ ಶಿಶುವೆ ಜೋ ಎಂದ
(ತೊ.ರಾ. VI 22–11)

ಲಂಕಾಧೀಶ್ವರನಾದ ದಶಕಂಠನನ್ನು ಈ ರೀತಿ ಒಂದು ಕಪಿಯೂ ತನ್ನ ಬಾಲದಲ್ಲಿ ಕಟ್ಟಿ ತೂಗಿ ಜೋಗುಳ ಹಾಡಿ– ಗೇಲಿ ಮಾಡುವುದೆಂದರೆ ಅದು ರಾವಣನ ಅಧರ್ಮದ ಫಲವೆಂದೇ ಹೇಳಬೇಕು. ಅಷ್ಟಕ್ಕೇ ಆ ತೊಟ್ಟಿಲಾಟ ನಿಲ್ಲದೆ, ಸುರ ಲೋಕದ ನಾರಿಯರೂ ಬಂದು ಜೋಗುಳ ಹಾಡಿದರೆನ್ನುವುದು ವಿಚಿತ್ರವೇ ಸರಿ—

ಹೋರಿ ಜೋ ಜೋ ಹರಿಹಯನ ಬಡಿ–
ಹೋರಿ ಜೋ ಜೋ ಬಲಿಯ ವಿಮಲಾ
ಗಾರದ ಬಲಾಜನದ ಜೋಳಿಗೆಯರಸ ಜೋಯೆನುತ
ಚಾರು ಮೇನಕಿ ಮುಖ್ಯ ಸುಮನೋ
ನಾರಿಯರು ಸ್ವರವೆತ್ತಿ ತೂಗಿದ–
ರಾರಣಾಂಗಣ ಮಧ್ಯದಲಿ ಲಂಕಾಪುರಾಧಿಪನ
(ತೊ.ರಾ. VI 22–12)

ಈ ಸನ್ನಿವೇಶ ಕುಮಾರ ವಾಲ್ಮೀಕಿಯದೇ ಸೃಷ್ಟಿ.

ಹೀಗೆ ಯುದ್ಧಕಾಂಡದ ಕಥಾವಸ್ತುವಿಗೆ, ಸಂಬಂಧಿಸಿದಂತೆ ವಾಲ್ಮೀಕಿ ರಾಮಾಯಣಕ್ಕೆ ಹೊರತಾದ ಹತ್ತು ಹಲವು ಸಂಗತಿ

ಗಳನ್ನು ತೋರವೆ ರಾಮಾಯಣ ವರ್ಣಿಸುತ್ತದೆ. ಎಲ್ಲವೂ ಶ್ರೀರಾಮನ ಅನಂತ ಮಹಿಮೆಗಳನ್ನು, ಅವನ ಅನುಚರರಾದ ವಾನರವೀರರ ಅಸಮಾನ ಸಾಹಸಗಳನ್ನೂ ಅವುಗಳ ಎದುರು ನಿಸ್ಸತ್ತ್ವಗೊಂಡ ರಾಕ್ಷಸ ಶಕ್ತಿಯನ್ನು ಚಿತ್ರಿಸುವಲ್ಲಿ ಸಾರ್ಥಕವೆನಿಸುತ್ತವೆ. ವೀರ, ಅದ್ಭುತ ರಸಗಳು ಈ ಭಾಗದಲ್ಲಿ ಮಡುಗಟ್ಟಿ ನಿಲ್ಲುವಂತೆ ಕವಿ ಪ್ರಯತ್ನಿಸಿದ್ದಾನೆ.

## ವೈಷ್ಣವ ವೀರ ಅತಿಕಾಯ

ಅತಿಕಾಯನ ಪಾತ್ರವಂತೂ ಕುಮಾರ ವಾಲ್ಮೀಕಿ ಕಡೆದ ಅಪೂರ್ವ ಸೃಷ್ಟಿ. ವಾಲ್ಮೀಕಿ ರಾಮಾಯಣದಲ್ಲಿ ರಾಕ್ಷಸ ವೀರರ ಸಮೂಹದಲ್ಲಿ ಒಬ್ಬನಾಗಿ ಮೆರೆದು, ಕಾಳಗದಲ್ಲಿ ಹೋರಾಡಿ ಕಣ್ಮರೆಯಾಗುವ ಒಂದು ಪಾತ್ರವಾಗಿರುವ ಅತಿಕಾಯನನ್ನು ಕುಮಾರ ವಾಲ್ಮೀಕಿಯು ಶ್ರೀ ರಾಮನ ಪರಮ ಭಕ್ತನನ್ನಾಗಿ ಚಿತ್ರಿಸಿದ್ದಾನೆ. ಆದರೆ ಇವನು ತನ್ನ ಚಿಕ್ಕ ತಂದೆಯಾದ ವಿಭೀಷಣನಂತೆ ರಾವಣ ಪಕ್ಷವನ್ನು ಬಿಟ್ಟು ಶ್ರೀರಾಮನಲ್ಲಿಗೆ ತೆರಳಿದವನಲ್ಲ. ಕರ್ತವ್ಯಕ್ಕೆ ಕಟ್ಟುಬಿದ್ದು ಭಕ್ತಿಶ್ರೀಯೊಂದಿಗೆ ವೀರಶ್ರೀಯನ್ನು ಮೆರೆದು ಸಿದ್ಧಿಯನ್ನು ಹೊಂದಿದ ಅಸಾಧಾರಣ ವ್ಯಕ್ತಿ.

ಕುಂಭಕರ್ಣನು ಹತನಾದ ಕರಾಳ ವಾರ್ತೆಯನ್ನು ಕೇಳಿ ಕೆರಳಿದ ರಾವಣ ರಣರಂಗಕ್ಕೆ ಹೊರಡಲು ಸಿದ್ಧನಾಗುತ್ತಿರಲು ಅಲ್ಲಿಗೆ ಅತಿಕಾಯನ ಪ್ರವೇಶವಾಗುತ್ತದೆ. ತಂದೆಗೆ ನಮಿಸಿ, "ಇಕ್ಷ್ವಾಕು ಕುಲಾಧಿಪನಾದ ಶ್ರೀರಾಮನು ಜಗದೇಕನಾಥನಲ್ಲದೆ ಬೇರಲ್ಲ. ಸೀತೆಯು ಜಗಜ್ಜನನಿ. ಸಾಮಾನ್ಯ ಸ್ತ್ರೀಯಲ್ಲ. ಆಕೆಯನ್ನು ಹಿಂದೆ ಒಪ್ಪಿಸಿ ಶರಣಾಗಿ—ಹರಿಯ ಅನುಗ್ರಹಕ್ಕೆ

ಪಾತ್ರರಾಗುವುದು ಉಚಿತ' ಎಂದು ವಿಧವಿಧವಾಗಿ ಹೇಳಿದರೂ, ರಾವಣನು ತನ್ನ ಛಲವನ್ನು ಬಿಡದಿರಲು, ಅತಿಕಾಯನು ಕೇವಲ ತಂದೆಯ ತೃಪ್ತಿಗಾಗಿ—ತನ್ನ ಕರ್ತವ್ಯ ಕರ್ಮವೆನ್ನುವಂತೆ ಯುದ್ಧಕ್ಕೆ ಸಿದ್ಧನಾಗಿ—"ಅಹುದು, ಮತ್ತೇನಾರ ಚಿತ್ತದಲಿಹು ದನವರೇ ಬಲ್ಲರು"—ಎನ್ನುತ್ತಾ ರಾವಣೇಶ್ವರನಿಂದ ರಣವೀಳ್ಯ ವನ್ನು ಪಡೆಯುತ್ತಾನೆ.

ವೈಷ್ಣವ ಶಿರೋಮಣಿಯಾದ ಅತಿಕಾಯನಿಗೆ ಯುದ್ಧ ರಂಗವು ಲೌಕಿಕ ವಿಜಯದ ರಂಗವಾಗಿರದೆ ಅಲೌಕಿಕ ಮೋಕ್ಷ ಶ್ರೀಯ ಸ್ವಯಂವರ ಮಂಟಪವಾಗಿ ಕಾಣಿಸಿಕೊಳ್ಳುತ್ತದೆ· ಕಾಳಗದ ಕಣಕ್ಕೆ ಯುದ್ಧ ಸನ್ನದ್ಧನಾಗಿ ಹೊರಟ ಅತಿಕಾಯನು ಲಂಕಾಪುರದ ಜನರನ್ನು ಕರೆ ಕರೆದು ಡಂಗುರ ಹೊಡೆದು ಆಹ್ವಾನಿಸುವ ರೀತಿ ಅನ್ಯಾದೃಶ.

ಬಹಡೆ ಬನ್ನಿ ಭವಾಬ್ಧಿ ಪೋತನ
ಬಹಳ ಪದವಿಯ ಬಯಸುವಡೆ ನೀವ್
ಬಹಡೆ ಬನ್ನಿ ಜರಾಮರಣ ವರ್ಜಿತನ ನೈದುವಡೆ
ಬಹುದು ಮತ ವೈಕಂಠವಾಸಿಯ
ಗೃಹದ ಭಕ್ತರ ಖೇಳ ಮೇಳದ
ಲಿಹುದು ನಿಮಗುಂಟಾದಡೆಂದನು ಭಟರಿಗತಿಕಾಯ

(VI 34–26)

ತುಳಸಿಯ ದಂಡೆಗಳನ್ನು ಶಿರದಲ್ಲಿ ಅಲಂಕರಿಸಿಕೊಂಡು, ಲಲಾಟದಲ್ಲಿ 'ಊರ್ಧ್ವತಿಲಕ'ವನ್ನು ಧರಿಸಿ ಯುದ್ಧಕ್ಕೆ ನಡೆದು, ಸರಳುಗಳ ಮೂಲಕ 'ಸಮರ ಮುಖ ಸಂಭಾವನೋಚಿತ ಸರಳ ಭಕ್ತಿ'ಯನ್ನು ಮೆರೆಯುತ್ತಾನೆ ಅತಿಕಾಯ. ಲಕ್ಷ್ಮಣನೊಂದಿಗೆ ಹೋರಾಟಕ್ಕೆ ನಿಂತು—'ಯದ್ಭಾವಂತದ್ಭವತಿ' ಎಂಬಂತೆ—

ಲಕ್ಷ್ಮಣನಲ್ಲೇ ಶ್ರೀರಾಮನನ್ನು ಕಂಡುಕೊಂಡು—ಬಾಣಗಳ ಮೂಲಕ ಅರ್ಚನೆ ನಡೆಸುತ್ತಾ ಧನ್ಯತೆ ಹೊಂದುತ್ತಿದ್ದಂತೆ—ಲಕ್ಷ್ಮಣನ ಅಸ್ತ್ರವೊಂದು ಅತಿಕಾಯನ ಕೊರಳನ್ನು ಕಚ್ಚಿ ಬಾಂದಳವನ್ನಡರುತ್ತದೆ. ಒಡನೆ ಅವನ ಒಡಲಿನಿಂದ ಆತ್ಮ ಜ್ಯೋತಿಯು ರವಿಬಿಂಬವನ್ನು ಸೇರಿಕೊಳ್ಳುತ್ತದೆ. ಕಳೇವರ ಇಳೆಗುರುಳುವುದನ್ನು ಕವಿ ಹೀಗೆ ಚಿತ್ರಿಸಿದ್ದಾನೆ—

ಮಿಸುಪ ಮಣಿಮಯ ಕುಂಡಲದಡಾ
ಳಿಸುವ ಕದಪಿನ ಮುಗುಳು ನಗೆಲಂ
ಬಿಸಿದ ವದನದ ವೀರರಸದಘಿಸವದ ಲೋಚನದ
ಅಸುರಪತಿ ಲಂಕೇಶ್ವರನ ಮೊಗ
ರಸದ ಸಿರಿ ಕೆಲಸಿಡಿವವೊಲು ತಲೆ
ವಿಶಿಖ ಮುಖದಲಿ ಕೆಡೆದುದಿಳೆಗತಿಕಾಯರಕ್ಕಸನ

(VI 34–78)

ಇಂತಹ ವರ್ಣನೆಗಳಲ್ಲಿ ಕುಮಾರ ವ್ಯಾಸನ (ಕರ್ಣಾವಸಾನದ ಸನ್ನಿವೇಶ) ಸ್ಪಷ್ಟ ಅನುಕರಣೆ ಎದ್ದು ಕಾಣುವಂತಿದೆ.

ಆದಿಕಾವ್ಯದಲ್ಲಿ ಬಹುಮಟ್ಟಿಗೆ ದುಷ್ಟ ಪ್ರವೃತ್ತಿಯವರಾಗಿ ಚಿತ್ರಿತರಾದ ರಾವಣ, ಕುಂಭಕರ್ಣ, ಅತಿಕಾಯ, ಇಂದ್ರಜಿತು-ಎಲ್ಲರೂ ತೊರವೆ ರಾಮಾಯಣದಲ್ಲಿ ಶ್ರೀರಾಮನ ದಿವ್ಯತೆಯನ್ನು ಗುರುತಿಸಿಕೊಂಡು ಉದ್ಧಾರ ಹೊಂದಿದ ಪುಣ್ಯ ಜೀವಿಗಳು. ಶ್ರೀರಾಮವತರಣದ ಸಂದರ್ಭವೆಂದರೆ ಎಲ್ಲ ಸ್ತರಗಳ ಜೀವಿಗಳ ಉದ್ಧಾರಾವಕಾಶ ಎನ್ನುವುದು ಕುಮಾರ ವಾಲ್ಮೀಕಿಯ ಶ್ರದ್ಧೆ.

## ರಾವಣನ ಜೀವನ ರಹಸ್ಯದ ಘೋಷಣೆ

ಪ್ರಾರಂಭದಲ್ಲಿ ಆಸುರದ ವಿಕಾರದ ಮೂರ್ತಿಯಾಗಿ, ದೈವ ಧರ್ಮ ವಿರೋಧಿಯಾಗಿ, ಕಾಮೋನ್ಮತ್ತನಂತೆ ಚಿತ್ರಿತನಾದ ರಾವಣನು ಕೊನೆಯಲ್ಲಿ ಅನಿರೀಕ್ಷಿತವೆಂಬಂತೆ—ಅಂತರಂಗದಲ್ಲಿ ದೈವಭಕ್ತನಾಗಿ, ದೈವಾನುಗ್ರಹ ರೂಪವಾದ ವಿಶ್ವರೂಪ ದರ್ಶನ ಭಾಗ್ಯವನ್ನು ಹೊಂದಿ ಧನ್ಯನಾಗುತ್ತಾನೆ. ಹೀಗೆ ತೊರವೆ ರಾಮಾಯಣದಲ್ಲಿ, ದ್ವೇಷವು ಗುಪ್ತಭಕ್ತಿಯಾಗಿ—ಒಳಗೊಳಗೇ ಬೆಳಗುತ್ತಾ—ರಾವಣನಿಗೆ ಮುಕ್ತಿಯ ಗತಿ ಸಿದ್ಧಿಸಿದ್ದನ್ನು ಅಪೂರ್ವವಾಗಿ ಚಿತ್ರಿಸಲಾಗಿದೆ.

ವಾಲ್ಮೀಕಿಯ ಸಂಸ್ಕೃತ ರಾಮಾಯಣದಲ್ಲಿ ತನ್ನ ಪಕ್ಷದವರು ರಣರಂಗದಲ್ಲಿ ಹತರಾದಂತೆಲ್ಲ ರಾವಣನ ಕ್ರೋಧಾಗ್ನಿ ಹೆಚ್ಚು ಹೆಚ್ಚಾಗಿ ಪ್ರಜ್ವಲಿಸುತ್ತದೆ. ಆದರೆ ತೊರವೆ ರಾಮಾಯಣದಲ್ಲಿ ಹಾಗಿಲ್ಲ. ತಮ್ಮ ವಿಭೀಷಣ, ಮಾವ ಮಾಲ್ಯವಂತ, ಮಿತ್ರ ಪ್ರಹಸ್ತ, ತಾಯಿ ಕೈಕಸೆ—ಇವರೆಲ್ಲರೂ ನೀಡಿದ ಹಿತಬೋಧೆ ಯನ್ನು ಅಲ್ಲಗಳೆದುದಕ್ಕಾಗಿ ಕೊನೆಯಲ್ಲಿ ರಾವಣನ ಮನಸ್ಸು ನೊಂದುಕೊಳ್ಳುತ್ತದೆ; ಪಶ್ಚಾತ್ತಾಪದಿಂದ ಅವನ ಅಂತರಂಗ ಪಕ್ವವಾದಂತೆ ಕಂಡುಬರುತ್ತದೆ. ಹಾಗೆಂದು, 'ತಲೆಯನ್ನು ಬೋಳಿಸಿಕೊಂಡು ಭೂಮಂಡಲದಲ್ಲಿ ಭೈರಾಗಿಯಾಗಿ ಬಾಳು ವುದಕ್ಕಾಗಲೀ, ವಿಷಸೇವಿಸಿ ಆತ್ಮಹತ್ಯೆಮಾಡಿಕೊಳ್ಳುವುದ ಕ್ಕಾಗಲೀ ಈ ವೀರ ದಶಕಂಠನ ಆತ್ಮ ಒಪ್ಪದು. ಅವನಿಗೆ ಈಗ ತೋಚಿದ್ದು ಒಂದೇ ದಾರಿ :

...............ಮೆಚ್ಚಿಸುವೆನಾ
ವನಜಪೀಠನ ನಿಗಮಜೂಟನ ಕೋಟಿ ಹೋಮದಲಿ
ತನಗೆ ನೂರ್ಮಡಿ ವಿಕ್ರಮದ ಹೆಂ

ಪಿನ ಮಹಾ ಭಟಕೋಟಿ ರಾವಣ
ರನು ಮಹಾಕ್ರತು ಕುಂಡದಲಿ ಹೊರಡಿಸುವೆನು'

(ತೊ.ರಾ. VI 48–5)

ಎಂದು ಮಹಾ ಮಾರಣ ಯಜ್ಞಕ್ಕೆ ತೊಡಗುತ್ತಾನೆ—ಲಂಕಾಧಿಪತಿ. ಆಗ ರಾವಣನ ಮನಸ್ಸನ್ನು ವಿಚಲಿತಗೊಳಿಸುವ ಉದ್ದೇಶದಿಂದ ಕಪಿನಾಯಕರು ಮಂಡೋದರಿಯನ್ನೆಳೆದು ಅವನ ಮುಂದೆ ವಸ್ತ್ರಾಪಹಾರಕ್ಕೆಳಸಿದಾಗ ಆಕೆಯ ಆಕ್ರಂದನವನ್ನು ಕೇಳಿ, ಕೆರಳಿ, ದಶಕಂಠನು ಚಂದ್ರಹಾಸವನ್ನುಗಿಯುತ್ತಾ, ಯಜ್ಞವೇದಿಕೆಯಿಂದೆದ್ದು, ಕಾಳಗಕ್ಕೆ ನುಗ್ಗುತ್ತಾನೆ....

ಅತಿಕಾಯ, ಇಂದ್ರಜಿತು ಎಲ್ಲರೂ ಹತರಾದ ಮೇಲೆ ಪುತ್ರಶೋಕತಪ್ತಳಾದ ಮಂಡೋದರಿಯು ತನ್ನ ಪತಿ ರಾವಣೇಶ್ವರನೊಡನೆ—'ಹರಿಯೊಡನೆ ಹಗೆಗೊಂಡು ಜೀವದಲುಳಿದವರು ಯಾರಿದ್ದಾರೆ? ಶ್ರೀ ರಾಘವನನ್ನು ಮರೆಹೋಗುವುದೇ ಲೇಸಲ್ಲವೇ? ಬದುಕಿ ಉಳಿದ ಪುತ್ರ ವಿರೂಪಾಕ್ಷನೊಬ್ಬನನ್ನಾದರೂ ಉಳಿಸಿಕೊಂಡು ಬಾಳೋಣ'—ಎಂದು ದೈನ್ಯದಿಂದ ಕೇಳಿಕೊಳ್ಳುತ್ತಾಳೆ—ಆಗ ರಾವಣನು ತನ್ನ ಸತಿಗೆ, ಅದುವರೆಗೂ ತನ್ನಲ್ಲೇ ಗುಪ್ತವಾಗಿರಿಸಿದ್ದ ತನ್ನ ಜೀವನ ರಹಸ್ಯವನ್ನು ಪ್ರಕಟಿಸುತ್ತಾನೆ.

ಬಲ್ಲೆನೀ ರಘುನಾಥ ಲಕ್ಷ್ಮೀ
ವಲ್ಲಭನು ತಾನೆಂಬುದನು ನಾ
ಬಲ್ಲೆನವನಿಜೆ ಲಕ್ಷ್ಮಿಯೆಂಬುದನಾಹವಕೆ ನೆರೆದ
ಭಲ್ಲುಕರು ಮರ್ಕಟರು ಸುರರೆಂ
ದೆಲ್ಲವೇತಕೆ ಕೇಳು ರಣಮುಖ
ದಲ್ಲಿ ರಾಮನ ಕೂಡುವುದು ಸಂಕಲ್ಪ ತನಗೆಂದ

(ತೊ. ರಾ. VI 46–22)

ಹೀಗೆನ್ನುತ್ತಾ "ಜಗದೊಳುತ್ತಮದ ಜಯವಿಜಯ ರಾವು, ಜನ್ಮಗಳೇಳನೊಲ್ಲದೆ ಬಂದೆವಾವು ಜನ್ಮತ್ರಯಂಗಳಲಿ, ಹೇಳಲಿಕೆ ಇನ್ನೊಂದು ಜನ್ಮದ ಪಾಳಯವು ನಮಗುಂಟು"—ಎಂದು ತಿಳಿಸಿ ಯುದ್ಧಭೂಮಿಯಲ್ಲಿ ಶ್ರೀರಾಮನೊಡನೆ ಹೋರಾಡುತ್ತ ಮಡಿಯುವುದರ ಮೂಲಕವಾಗಿಯೇ ತನ್ನ ಶಾಪದ ಮೋಕ್ಷ, ಜನ್ಮ ಸಾರ್ಥಕತೆ—ಎಂದು ಘೋಷಿಸುತ್ತಾನೆ.

ದಶಕಂಠನ ಈ ನುಡಿ ಕೇಳುತಿದ್ದಂತೆ, ನಮ್ಮ ಬಗೆಯಲ್ಲಿ ರೂಪಿತವಾಗಿದ್ದ ಪ್ರತಿನಾಯಕನ ಚಿತ್ರ ಪಕ್ಕನೆ ಅದೃಶ್ಯವಾಗುತ್ತದೆ. ಆ ಸ್ಥಾನದಲ್ಲಿ ರಾಮಾನುಗ್ರಹಗಳಿಸಹೊರಟ ಗುಪ್ತಭಕ್ತ ರಾವಣನು ಗೋಚರಿಸುತ್ತಾನೆ. ಅವನ ಬಹಿರಂಗದ ಕ್ರೋಧ ಜ್ವಾಲೆಯೆಲ್ಲ ಅವನ ಅಂತರಂಗದ ಶ್ರೀರಾಮಾರಾಧನೆಯ ಧೂಪ ಧೂಮವೆನ್ನುವುದು ಖಚಿತವಾಗುತ್ತದೆ.

ಹೀಗೆ ಆತ್ಮಾರ್ಪಣೆಯಿಂದ ಭವಬಂಧನ ಮುಕ್ತನಾಗಲು ಯುದ್ಧಕ್ಕೆ ಹೊರಟ ರಾವಣೇಶ್ವರನಲ್ಲಿ ಕೆಲವು ಉದಾತ್ತ ಗುಣಗಳನ್ನು ಗುರುತಿಸಿ ಅವನ ಹಿರಿಮೆಯನ್ನು ಕೊಂಡಾಡಿರುವುದು ಕುಮಾರ ವಾಲ್ಮೀಕಿಯ ರಾಮಾಯಣದ ಇನ್ನೊಂದು ವೈಶಿಷ್ಟ್ಯ.

ರಾವಣನು ತಾನು ರಣಕ್ಕೆ ಹೊರಡುವ ಮುನ್ನ ತನ್ನ ಭಂಡಾರಕ್ಕೆ ಅಷ್ಟದಿಕ್ಪಾಲಕರಿಂದ ಕಪ್ಪವಾಗಿ ಬಂದು ತುಂಬಿದ್ದ 'ಪರಿಪರಿಯ ನಾಣ್ಯವೆಲ್ಲವನ್ನು ಅಖಿಳಯಾಚಕ ಸಂದಣಿಗೆ' ವಿತರಣೆಮಾಡಿದ್ದು ಮಾತ್ರವಲ್ಲದೆ, ತನ್ನವರನ್ನೆಲ್ಲ ಕರೆಕರೆದು 'ಮನೆವೆರಸಿ ಸೂರೆಯಬಿಟ್ಟು, ತೆರಿಗೆಯ ಬರಹಗಳನ್ನು' ತೊಡೆದು ಹಾಕಿ ಸಂತಸಪಡಿಸುತ್ತಾನೆ. ಸೆರೆಮನೆಯಲ್ಲಿ ಬಂದಿಗಳಾಗಿದ್ದ ದಾನವ ಸುರ ನರೋರಗ ಜನವನ್ನು ಮನ್ನಿಸಿ, ಬಂಧಮುಕ್ತ

ಗೊಳಿಸಿದ ಮೇಲೆ, ಆಪ್ತ ಬಂಧುವರ್ಗದವರನ್ನು ಉದ್ದೇಶಿಸಿ, ಲಂಕಾಧಿಪನು ಯುದ್ಧದಲ್ಲಿ ತಾನು ರಣದಲ್ಲಿ ಅಳಿದರೆ, ತಮ್ಮನಾದ ವಿಭೀಷಣನನ್ನು ರಾಜನೆಂದು ಗೌರವಿಸಬೇಕಾಗಿ ಅಪೇಕ್ಷಿಸುತ್ತಾನೆ. ಈ ವರ್ಣನೆಗಳೆಲ್ಲವೂ ರಾವಣನ ಕುರಿತಾಗಿ ನಮ್ಮ ಮೆಚ್ಚುಗೆಗಳಿಸುವಲ್ಲಿ ಸಾರ್ಥಕವೆನಿಸುತ್ತವೆ. ಈ ಸಂದರ್ಭದಲ್ಲಿ ರನ್ನನ 'ಸಾಹಸ ಭೀಮವಿಜಯ'ದ ಕೌರವೇಶ್ವರನ ಉದಾತ್ತತೆಯ ಚಿತ್ರಣ ಕಣ್ಣಮುಂದೆ ಸುಳಿದು ಹೋಗುತ್ತದೆ.

ಹೀಗೆ ಒಳಗೊಳಗೆ 'ಹದಗೊಂಡ' ರಾವಣನಿಗೆ ಕುಮಾರ ವಾಲ್ಮೀಕಿಯು ಶ್ರೀರಾಮನಲ್ಲಿ ವಿಶ್ವರೂಪವನ್ನು ಕಾಣುವ ಸೌಭಾಗ್ಯವನ್ನು ರಣರಂಗದಲ್ಲಿ ಕಲ್ಪಿಸುತ್ತಾನೆ. ಹೀಗೆ ಪ್ರತ್ಯಕ್ಷನಾದ ಪರಮಾತ್ಮನನ್ನು ಕಂಡ ಅಸುರೇಂದ್ರ ತನಗಿನ್ನು ಮುಕ್ತಿಯುಸೂರೆ ಎಂದು ಹಿಗ್ಗುವುದು ಸಹಜವಾಗಿದೆ. ತನುತ್ಯಾಗಕ್ಕೆ ನಿರ್ಧರಿಸಿಕೊಂಡ ರಾವಣನಿಗೆ ಮರಣವೇ ಮಹಾನವಮಿಯಾಗುತ್ತದೆ.

ವಾಲ್ಮೀಕಿ ರಾಮಾಯಣದಲ್ಲಿ ದೊರೆಯದ ಇಂತಹ ಮೋಕ್ಷಕಾಮಿ ಮತ್ತು ಮೋಕ್ಷಗಾಮಿ ರಾವಣನ ಪಾತ್ರಚಿತ್ರಣಕ್ಕೆ ಕುಮಾರ ವಾಲ್ಮೀಕಿಯು ಅಧ್ಯಾತ್ಮ ರಾಮಾಯಣದ ವಸ್ತು ಮತ್ತು ಮಧ್ವಾಚಾರ್ಯರ (ಜೀವದ್ವಯಾವೇಶ) ತತ್ತ್ವಗಳಿಗೆ ಋಣಿಯಾದಂತೆ ತೋರುತ್ತದೆ. ನಾಗಚಂದ್ರನ 'ರಾಮಚಂದ್ರ ಚರಿತ ಪುರಾಣ'ವನ್ನು ಕವಿ ಓದಿಕೊಂಡ ಅಂಶ ವ್ಯಕ್ತವಾಗುತ್ತದೆ.

ರಾವಣನ ಚಾರಿತ್ರ್ಯದ ಬಗೆಗೆ ವಾಲ್ಮೀಕಿ ರಾಮಾಯಣದ ರಾಮನು ಆಡಿದ ನುಡಿಗಳು ಹೀಗಿವೆ :

ತೇಜಸ್ವೀ ಬಲವಾನ್ ಶೂರ: ಸಂಯುಗೇಷುಚ ನಿತ್ಯಶ:
ಶತಕ್ರತು ಮುಖ್ಯೈರ್ದೇವೈಃ ಶ್ರೂಯತೇ ನಪರಾಜಿತಃ
ಮಹಾತ್ಮಾ ಬಲಸಂಪನ್ನೋ ರಾವಣೋ ಲೋಕರಾವಣಃ
(ವಾ.ರಾ. VI 114/100–101)

"ರಾವಣನಲ್ಲಿ ಅಧರ್ಮವೂ, ಅನೃತವೂ ತುಂಬಿದ್ದವಾದರೂ ಆತನು ಮಹಾ ತೇಜಸ್ವಿ, ಬಲಾಢ್ಯ, ಶೂರ. ಸಂಗ್ರಾಮದಲ್ಲಿ ಇಂದ್ರಾದಿದೇವತೆಗಳಿಂದಲೂ ಪರಾಜಯ ಹೊಂದದ ಪರಾಕ್ರಮಿಯೆಂದು ಕೀರ್ತಿಶಾಲಿಯಾಗಿದ್ದಾನೆ. ಬಲಶಾಲಿಯಾಗಿ ಲೋಕರಾವಣನೆನಿಸಿದ ಮಹಿಮಾನ್ವಿತನಾಗಿದ್ದಾನೆ, ಮಹಾತ್ಮನಾಗಿದ್ದಾನೆ"—

ರಾವಣನ ವ್ಯಕ್ತಿತ್ವದಲ್ಲಿ ದೋಷ, ಗುಣಗಳೆರಡೂ ಇದ್ದವು. ತನ್ನ ದೋಷಗಳಿಗಾಗಿ ಅವನು ಪಟ್ಟ ಲೌಕಿಕ ನಷ್ಟ ಅಪಾರ, ಸಾಂಸಾರಿಕ ದುಃಖ ಅಗಾಧ. ಅದರಂತೆಯೇ ಅವನಲ್ಲಿ ಸುಪ್ತವಾಗಿದ್ದ ಗುಣಗಳಿಂದಾಗಿ ಅವನು ಗಳಿಸಿದ ಅಲೌಕಿಕಗತಿಯೂ ಅಷ್ಟೇ ಅಸಮಾನವಾದದ್ದು. ರಾವಣನ ಈ ಇಮ್ಮೊಗಗಳ ದರ್ಶನವನ್ನು ಕುಮಾರ ವಾಲ್ಮೀಕಿಯು ನಮಗೆ ಪೂರೈಸುವ ಉದ್ದೇಶವಿರಿಸಿಕೊಂಡಂತೆ ತೋರುತ್ತವೆ. ಇದರ ಹೊರತಾಗಿ, ಇಂದಿನ ವಿಮರ್ಶಕರ ದೃಷ್ಟಿಗನುಗುಣವಾದ ದುರಂತ ರಾವಣತ್ವದ ಕಲ್ಪನೆಯಾಗಲಿ, ಅದರ ಉದ್ದೇಶವಾಗಲಿ ಕವಿಗೆ ಇದ್ದಂತೆ ಎನಿಸುವುದಿಲ್ಲ.

## ಕಾವ್ಯಾಧಿಪತಿ, ದಿವ್ಯನಾಯಕ ಶ್ರೀರಾಮ

ತನ್ನ ಕಾವ್ಯದ ಅಧಿಪತಿ ತೊರವೆಯ ನರಹರಿ ಎಂದೇ ಸ್ಪಷ್ಟವಾಗಿ ನಂಬಿದ ಕುಮಾರ ವಾಲ್ಮೀಕಿಗೆ ದೇವೋತ್ತಮನಾದ

ನಾರಾಯಣನೇ ಶ್ರೀರಾಮನಾಗಿ ಅವತರಿಸಿದ್ದಾನೆ ಎನ್ನುವುದರಲ್ಲಿ ಸಂದೇಹವಿಲ್ಲ. ಅಸಮಾನನಾದ ಬಿಲ್ಲಾಳು, ಅನುಪಮ ಧರ್ಮ ಚರಿತ, ಉಜ್ವಲ ಪ್ರೇಮಮೂರ್ತಿಯಾಗಿ ಚಿತ್ರಿತನಾದ ಶ್ರೀರಾಮನು ಅದ್ವಿತೀಯ ರಾಜನೀತಿ ನಿಪುಣನೆಂಬುದೂ ವ್ಯಕ್ತ ವಾಗುತ್ತದೆ. ಕಡಲತಡಿಯಲ್ಲಿ ರಾಕ್ಷಸ ಗುಪ್ತ ಚಾರರನ್ನು ಕಪಿ ವೀರರು ಸೆರೆಹಿಡಿದು ಶ್ರೀರಾಮನ ಮುಂದೆ ನಿಲ್ಲಿಸಿದಾಗ ಅವರು ರಾವಣೇಶ್ವರನ ಪ್ರತಾಪವನ್ನು ಹೊಗಳಿ, ಅವನೊಂದಿಗೆ ಹೋರಾಟ ಸಲ್ಲದು ಎಂದು ಎಚ್ಚರಿಸುತ್ತಾರೆ. ಆ ನುಡಿಗಳನ್ನು ಕೇಳಿ ಸಹಿಸದ ವಾನರವೀರರು" 'ಬಾಯ ಕೊಯ್ ಬಗುಳುವ ನಿಶಾಚರ ನಾಯಿಗಳನು' ಎಂದು ಬೇಹಿನವರನ್ನು ಭಂಗಿಸಲು ಮುನ್ನುಗ್ಗುತ್ತಾರೆ. ಆಗ ಶ್ರೀರಾಮನು "ದೂತರ ನೋಯಿಸು ವುದು ಅಪಕೀರ್ತಿ" ಎಂದು ರಾಜಧರ್ಮವನ್ನೂ, "ಚರರು ತಂತಮ್ಮರಸುಗಳ ಭುಜಸಿರಿಯ ನಾಹವದುಬ್ಬುಗೊಬ್ಬಿನ ಸುಪ್ರ ತಾಪವ ವೈರಿರಾಯರ ಲೊರೆವುದೇ ಭೂಷಣವಲಾ"—ಎಂದು ದೂತಧರ್ಮವನ್ನು ವ್ಯಾಖ್ಯಾನಿಸುತ್ತಾನೆ. ನುಡಿದಂತೆ ನಡೆ ಯುತ್ತಾ, ತನಗೆ ಶರಧಿಕೊಟ್ಟ ರತ್ನಾಭರಣಗಳನ್ನು ವಿರೋಧ ಪಕ್ಷದ ಚರರಿಗಿತ್ತು ಮನ್ನಿಸುತ್ತಾನೆ. ಆ ಬೇಹಿನವರು ನಿರ್ಭೀತಿ ಯಿಂದ ಕಪಿಸೇನಾ ಶಿಬಿರವನ್ನು ನೋಡಿಕೊಂಡು ದಶಕಂಠನಿಗೆ ವರದಿ ಒಪ್ಪಿಸುವಂತೆ ಅನುವು ಮಾಡೆಂದು ಹನುಮಂತನಿಗೆ ನೇಮಿಸುತ್ತಾನೆ.

ರಾಜಧರ್ಮಕ್ಕನುಗುಣವಾಗಿ ಸಂಧಾನ ಪ್ರಯತ್ನವನ್ನು ಅಂಗದನ ಮೂಲಕ ಕೈಗೊಳ್ಳುತ್ತಾನೆ ಶ್ರೀರಾಮ. ಆದರೆ ಆ ಸಂಧಾನ ವಿಧಾನದ ಮುನ್ನವೇ ಸುಗ್ರೀವನು ರಾವಣನನ್ನು ಭಂಗಿಸಿದ್ದು ಶ್ರೀರಾಮನಿಗೆ ಸರಿಕಾಣಲಿಲ್ಲ. "ರಾಜನೀತಿಯ

ನೊದೆಪೆ ನಾವಿನ್ನೆಂಬುದೇನು ?"—ಎಂದು ಶ್ರೀರಾಮನು ಕಪಿ ರಾಜನ ವರ್ತನೆಯನ್ನು ಆಕ್ಷೇಪಿಸಿ, ಖಂಡಿಸುತ್ತಾನೆ. ಸಂಧಿ ಕಾರ್ಯಕ್ಕಾಗಿ ರಾವಣ ಮಿತ್ರನಾಗಿದ್ದ ವಾಲಿಯ ಪುತ್ರ ಅಂಗದ ನನ್ನೇ ಆಯ್ಕೆ ಮಾಡಿ ರಾವಣನ ಆಸ್ಥಾನಕ್ಕೆ ಕಳುಹಿದ್ದರಲ್ಲಿಯೂ ರಾಮನ ಅಸಾಧಾರಣ ರಾಜನೀತಿ ನೈಪುಣ್ಯವು ಪ್ರಕಟವಾಗು ತ್ತದೆ.

ಯೋಧಧರ್ಮಕ್ಕನುಗುಣವಾಗಿ, ವಿರಥನನ್ನು ನೋಯಿಸೆ ನೆಂದು ನುಡಿದು ರಾವಣನನ್ನು ಮರಳಿಸಿದ್ದರಲ್ಲಿಯೂ ರಾಮನ ರಾಜನೈತಿಕ ಧರ್ಮಪ್ರಜ್ಞೆಗೆ ಉತ್ತಮ ಉದಾಹರಣೆ ದೊರೆಯು ತ್ತದೆ.

ತನ್ನನ್ನು ಮರೆಯ ಎಸುಗೆಯಿಂದುರುಳಿಸಿದ ರಾಮನನ್ನು ತೀವ್ರವಾಗಿ ಆಕ್ಷೇಪಿಸಿದ ವಾಲಿಯೇ ದಶರಥನಂದನನಲ್ಲಿ ಪರಮ ದೈವದ ದರ್ಶನ ಪಡೆದು ಧನ್ಯನಾದಂತೆ ಚಿತ್ರಿಸಿದ್ದು ಕುಮಾರ ವಾಲ್ಮೀಕಿಯ ಭಕ್ತಕವಿತ್ವಕ್ಕೆ ಮತ್ತೊಂದು ಉಜ್ವಲ ನಿದರ್ಶನ :

ಇದು ಮಹೀಮಂಡಲದ ಭಾರವ
ನೊದೆಯಲಾದ ವಿಲಾಸ ವಿಭವಾ
ಸ್ಪದವಲಾ ಮನುಜಾಂಗ ವಿದು ತಾನ ಪ್ರಸಿದ್ಧ ವಲಾ
ಸುದತಿಯೆಂಬುದು ನೆವನು ತಾನಿಂ
ತಿದರ ಮೇಲೀ ಪರಮ ದೈವದ
ಪದವ ಭಜಿಸಲು ಬೇಕೆನುತ ಕೈ ಮುಗಿದನಾವಾಲಿ

(ತೊ.ರಾ. IV 4–54)

ವಾಲಿ ತನ್ನ ಜೀವನದ ಚರಮಕ್ಷಣದಲ್ಲಿ ಕಂಡುಕೊಂಡ ಈ ದಾರ್ಶನಿಕತೆ ಅಸಾಧಾರಣವಾದದ್ದು. ಶ್ರೀರಾಮನ ದಿವ್ಯತೆಗೂ ವಾಲಿಯ ಉದಾತ್ತತೆಗೂ—ಇದು ಒಪ್ಪುವಂತಹದು.

ಸೀತಾ ಪರೀಕ್ಷೆಯ ಸಂದರ್ಭದಲ್ಲಿ ಕುಮಾರ ವಾಲ್ಮೀಕಿಯ ಶ್ರೀರಾಮನು–"ಸೀತೆಯು ಅಂಜದಿರ್ದಡೆ ಹುತವಹನ ಹೊಗಲಿ" ಎಂದು ತಾನೇ ಸೂಚಿಸುವುದು ಇನ್ನೊಂದು ವಿಶೇಷ (ವಾಲ್ಮೀಕಿ ರಾಮಾಯಣದಲ್ಲಿ ಸೀತೆಯು ತಾನಾಗಿಯೇ ಅಗ್ನಿಪರೀಕ್ಷೆಗೆ ತನ್ನನ್ನೊಡ್ಡಿಕೊಳ್ಳಲು ಸಿದ್ಧಳಾದಳೆಂಬ ಹೇಳಿಕೆಯನ್ನು ಕುಮಾರ ವಾಲ್ಮೀಕಿಯು ಅನುಸರಿಸಿದಂತಿಲ್ಲ). ಅಗ್ನಿ ಪ್ರವೇಶ ಮಾಡಿದ ಸೀತೆಯು ಪುಟವಿಟ್ಟ ಮಿಸುನಿಯಂತೆ ಪರಿಶುದ್ಧಳಾಗಿ ಹೊರ ಬಂದರೂ—ರಾಮನು ಸೀತೆಯ ಸಚ್ಚಾರಿತ್ರ್ಯವನ್ನು ಸಂದೇಹಾತೀತವಾಗಿ ಒಪ್ಪಿಕೊಳ್ಳುವುದಿಲ್ಲ—ತನ್ನ ವಂಶದ ಹಿರಿಯ ರಾಜರು ಬಂದು ಆಕೆಯ ಚಾರಿತ್ರ್ಯಕ್ಕೆ ಸಾಕ್ಷಿ ಹೇಳಬೇಕು ಎಂದು ಹಟ ಹಿಡಿಯುತ್ತಾನೆ. ಈ ರೀತಿಯಲ್ಲಿ ಶ್ರೀರಾಮನು ಆಗ್ರಹಪಡುವುದು ಅವನ ದಿವ್ಯತೆಗೆ ಒಪ್ಪುವ ಅಂಶವೇ?—ಎಂದು ಸಾಮಾನ್ಯ ಓದುಗನು ಪ್ರಶ್ನಿಸುವುದು ಸಹಜವಾದರೂ ಕುಮಾರ ವಾಲ್ಮೀಕಿಯು ಆ ಕುರಿತು ತಲೆಕೆಡಿಸಿಕೊಂಡಂತೆ ತೋರುವುದಿಲ್ಲ. ರಾಮನ ವಂಶಪ್ರಜ್ಞೆ—ಅಭಿಮಾನಗಳು ಲೋಕಕ್ಕೆ ಪ್ರಕಟವಾಗಲಿ ಎಂದೋ ಸೀತಾಮಾತೆಯ ಪಾವಿತ್ರ್ಯದ ಕೀರ್ತಿಯನ್ನು ಸೂರ್ಯವಂಶದ ಹಿಂದಣ ಚಕ್ರವರ್ತಿಗಳೂ ಘೋಷಿಸುವಂತಾಗಲಿ—ಎಂದೋ ಕವಿ ಇಂತಹ ಪ್ರಸಂಗಗಳನ್ನು ಕಲ್ಪಿಸಿರಬಹುದು.

## ದಿವ್ಯಲೀಲೆಯಲ್ಲಿ ಮಾನವಸ್ವಭಾವ ಚಿತ್ರಣ

ಆದಿ ಕವಿ ವಾಲ್ಮೀಕಿಯು ಚಿತ್ರಿಸಿದ ಮಾನವೋತ್ತಮನಾದ ರಾಮನು ಕುಮಾರ ವಾಲ್ಮೀಕಿಯ ಕೃತಿಯಲ್ಲಿ ದೇವೋತ್ತಮನಾದ ಶ್ರೀರಾಮನಾಗಿ ವರ್ಣಿತನಾದುದರಿಂದ—ತೊರವೆ ರಾಮಾಯಣ

ದಲ್ಲಿನ ಎಲ್ಲ ಘಟನೆಗಳೂ ದಿವ್ಯತೆಯ ಚೌಕಟ್ಟಿನೊಳಗೇ ನಡೆದಂತೆ ತೋರಿ, ಅಲ್ಲಿನ ಯಾವ ಪಾತ್ರಕ್ಕೂ ಮಾನವೀಯವಾದ ಸ್ವತಂತ್ರ ವ್ಯಕ್ತಿತ್ವವೇ ಇಲ್ಲವಾಗಿದೆ—ಎಂದು ವಿಮರ್ಶಕರು ಆತಂಕಗೊಳ್ಳುವುದು ಸಹಜ. ಆದರೂ ದಿವ್ಯಪುರುಷನಾದ ಶ್ರೀರಾಮನು ಮಾನವನಾಗಿ ನಡೆಸಿದ ಅವತಾರಲೀಲೆಯನ್ನು ಸಾಧ್ಯವಾದಷ್ಟು ಲೋಕಸಹಜವಾಗಿ ವರ್ಣಿಸಬೇಕೆನ್ನುವುದು ಕವಿಯ ಮನೋಗತವಿದ್ದಂತೆ ತೋರುತ್ತದೆ. ಅಭಿನಯ ಕಲೆಯಲ್ಲಿ ತನ್ಮಯನಾದ ನಟನು ತಾನು ಮರೆಯಬಾರದ ರಂಗ ಪ್ರಜ್ಞೆಯಂತೆ, ಇಲ್ಲಿ ಶ್ರೀರಾಮನ ಲೀಲೆಯಲ್ಲಿ ಮಾನವತೆ, ಲೌಕಿಕತೆಗಳ ಸುಳಿವು ಮೂಡಿಸುವ ಪ್ರಯತ್ನ ನಡೆದಿದೆ.

ರಾಮನ ಮಗುವುತನ, ತೊಟ್ಟಿಲ ಜೋಗುಳ, ಉಪನಯನ ಶಾಸ್ತ್ರ-ಶಸ್ತ್ರಾಭ್ಯಾಸ ಇತ್ಯಾದಿಗಳನ್ನು ಕವಿಯು ಮಾನುಷಸಹಜವಾಗಿಯೇ ಚಿತ್ರಿಸುವ ಎಚ್ಚರವಹಿಸುತ್ತಾನೆ.

ವಿಶ್ವಾಮಿತ್ರನು ರಾಮಲಕ್ಷ್ಮಣರನ್ನು ಕರೆದುಕೊಂಡು ತನ್ನ ಆಶ್ರಮಕ್ಕೆ ಹೊರಟಾಗ, ಅಯೋಧ್ಯೆಯ ಪೌರರು ದುಃಖ, ಕ್ರೋಧ ಸಹಿಸಲಾರದೆ ಜಾಳಿಸುವ ಕಂಬನಿಗಳಲಿ, ಬಿರುನಾಲಗೆಗಳಲಿ ಆ ಮುನಿಯನ್ನು ನಿಂದಿಸಲು ಹೆದರುವುದಿಲ್ಲ. ಮುಂದೆ ಘೋರಕಾನನವು ರಘುರಾಜಪುತ್ರರಿಗೆ ಭಯವನ್ನು ಬೀರುತ್ತದೆ. ತಾಟಕಿಯು ಎದುರಾದಾಗ—'ಹೆಂಗಸನ್ನು ಕೊಲ್ಲುವುದು ಸರಿಯೆ ?' ಎಂದು ರಾಮನು ಮಾನವಸಹಜ ಸಂದೇಹ ಯೋಚನೆಗಳಿಗೆ ಒಳಗಾಗುತ್ತಾನೆ. ಶಿಲೆಯ ಮಧ್ಯದೊಳವತರಿಸಿದ ಅಹಲ್ಯೆಯನ್ನು ಕಂಡು ಮುಗ್ಧನಂತೆ "ಲಲನೆಯಾಕೆಯದಾರು ?" ಎಂದೂ ಪ್ರಶ್ನಿಸದಿರುವುದಿಲ್ಲ. ಹೀಗೆ ಮಾನವಸಹಜವಾದ ಭಯ, ಸಂದೇಹ, ಯೋಚನೆ, ಕುತೂಹಲ—ಎಲ್ಲವೂ ರಾಮನಲ್ಲಿ ಇವೆ.

ಆದಿಪುರುಷ, ಆದಿಲಕ್ಷ್ಮಿಯರಾದ ರಾಮ, ಸೀತೆಯರ ವಿವಾಹ ದಲ್ಲಿ ಕವಿಯು ಮಧುಪರ್ಕ, ಮೆಟ್ಟಕ್ಕಿ, ಗುಡಜೀರಿಗೆ, ಓಕುಳಿ, ಬಳುವಳಿ, ಮಾಮನೆ—ಮೊದಲಾದ ಲೋಕಾಚರಣೆಗಳನ್ನು ವಿವರಿಸಲು ಮರೆಯುವುದಿಲ್ಲ.

ವನವಾಸಕ್ಕೆ ಹೊರಟ ರಾಮನು ತನ್ನನ್ನು ಅನುಸರಿಸಲು ಮುಂದಾದ ಮಡದಿಗೆ "ಹಸಿದಡಿಲ್ಲ ಮೃಷ್ಟಾನ್ನಚಯ, ಮೃದು ಸ್ತರಣದಿಂದೆಸೆವ ಮಣಿಪರ್ಯಂಕವಿಲ್ಲ.... ಬಿಸಿಲು—ಮಳೆ, ಚಳಿ ಗಳಿಗೆ ಸಲೆಸೈರಿಸುವ ದೇಹವೆ ನಿನ್ನದು?" ಎಂದೆಲ್ಲ ಕಾಡಿನ ಸಂಕಷ್ಟಗಳನ್ನು ಪಟ್ಟಿಮಾಡಿ ತಿಳಿಸುತ್ತಾನೆ....

ಸುಮಂತ್ರನಿಂದೊಡಗೂಡಿದ ರಾಮಲಕ್ಷ್ಮಣ ಸೀತೆಯರು ತಮಸಾ ನದಿಯ ನೀರನ್ನು ಮಾತ್ರ ಕುಡಿದು ರಾತ್ರಿಯನ್ನು ಕಳೆಯುತ್ತಾರೆ. ಸುಮಂತ್ರನನ್ನು ಬೀಳ್ಕೊಂಡ ಮೇಲೆ ಮೂವರು ಕಾಲುನಡೆಯಲ್ಲಿ ಮುಂದುವರಿಯುತ್ತಾರೆ. ಬಿಸಿಲ ಬೇಗೆಗೆ ಅವರ "ಮುಸುಡುಗಳು ಕುಂದುತ್ತವೆ, ಎಸೆವ ತನು ಕಾಂತಿಗಳು ಕಂದು ತ್ತವೆ"—ಸಾಮಾನ್ಯ ಮನುಷ್ಯರಂತೆಯೇ.

ಜಟಾಯುವನ್ನು ಕಂಡು ಅವನ ಪರಿಚಯವಾದ ಮೇಲೆ ಶ್ರೀರಾಮನು ಅವನೊಡನೆ

ಅಯ್ಯನ ಸ್ಥಿರನಾದ ಬಳಿಕೆಮ
ಗಯ್ಯ ನೀ ನಾಕದಲಿ ನೆಲೆಗೊಂ
ಡಯ್ಯ ನೀಗ ಜಟಾಯು ನೀ ನೆಮಗೀಗ ದಶರಥನೆ

(ತೊ.ರಾ. III 1-45)

ಎಂದು ಜಟಾಯು ಪಕ್ಷಿಯೊಡನೆ ಮಾನವ ಸಂಬಂಧವನ್ನು ಬೆಳೆಸುತ್ತಾ—ಜಟಾಯು ತನಗೆ ದಸರಥಸಮಾನ ಎನ್ನುವಷ್ಟು ವಾತ್ಸಲ್ಯ ಪ್ರದರ್ಶಿಸುತ್ತಾನೆ, ಪಿತೃಭಕ್ತಿ ಅಭಿವ್ಯಕ್ತಗೊಳಿಸು ತ್ತಾನೆ.

ಸೀತಾಪಹಾರದ ಬಳಿಕ ಶ್ರೀರಾಮನು ಸಾಮಾನ್ಯ ಮಾನವರಂತೆಯೇ ಅಸಾಮಾನ್ಯವಾದ ವಿರಹವೇದನೆಗೆ ಬಲಿಯಾಗಿ ತತ್ತರಿಸುವುದನ್ನು ಕುಮಾರ ವಾಲ್ಮೀಕಿ ಹೃದಯಂಗಮವಾಗಿ ವರ್ಣಿಸುವುದರಲ್ಲಿ ಸಫಲತೆಗಳಿಸುತ್ತಾನೆ. ರಾಮನು ತನ್ನ ಲಕ್ಷ್ಮಣನೊಂದಿಗೆ ಸೀತೆಯನ್ನು ಹುಡುಕಾಡಿದ ರೀತಿಯೂ ಅತ್ಯಂತ ಮುಗ್ಧ, ಮಾನವಸಹಜ....

ಮುನಿ ಮುನಿಗಳಾಶ್ರಮದ ವಿಮಳಾಂ
ಗನೆಯರಲಿ ವನವೀಥಿಯಲಿ ಕುಮು
ದಿನಿ ಕುಶೇಶಯದುರು ತಟಾಕಂಗಳ ತಟಂಗಳಲಿ
ಧ್ವನಿಗಳಿದ್ದೆಡೆಗಳಲಿ ತನುಸಂ
ಜನಿತ ಖೇದದ ಘನ ನಿಷಾದದ
ಮನದ ಮನುಕುಲ ರಾಜಸೂನುಗಳರಸಿದರು ಸತಿಯ

(ತೊ.ರಾ. III 11-33)

ಎಲ್ಲೆಲ್ಲಿಯೂ ಅವರಿಗೆ ಸೀತೆಯದೇ ಧ್ಯಾನ, ಆಕೆಯದೇ ಚಿಂತೆ, ಕಾಣಾಟ—ಹೀಗಿದ್ದರೂ, ವನವಾಸವ್ರತಸ್ಥನಾದ ಶ್ರೀರಾಮನು ನಗರ ರಾಜಧಾನಿಗಳಾವುದನ್ನು ಪ್ರವೇಶಿಸದಂತೆ, ಅಲ್ಲಿ ಸೀತಾನ್ವೇಷಣೆ ನಡೆಸದಂತೆ ವನವನಾಂತರಗಳಲ್ಲಿಯೇ ಮುನ್ನಡೆಯುತ್ತಾ ಹುಡುಕಾಟ ನಡೆಸಿದಂತೆ ವರ್ಣಿಸಿರುವುದರಲ್ಲಿ ಕವಿಯ ಎಚ್ಚರ, ಔಚಿತ್ಯಪ್ರಜ್ಞೆ ವ್ಯಕ್ತವಾಗುತ್ತದೆ.

ಪ್ರಸ್ರವಣ ಪರ್ವತದ ಮೇಲೆ ಎದುರಾದ ಭೀಕರ ಮಳೆಗಾಲವನ್ನು ರಾಮಲಕ್ಷ್ಮಣರು ಸಾಮಾನ್ಯ ಕಾಡಾಡಿಗಳಂತೆಯೇ 'ಬಲುಗವಿಯ ಗೇಹಂಗಳಲಿ, ಜಂಝಾನಿಲ ನಿವಾರಣದ ವಿವಿಧ ಪುಣ್ಯ ಮೃಗಾಜಿನಂಗಳ ನಿವಸನದಲಿ, ನೀರೇಜ ಕಂದದ ವನ ಫಲಾಹಾರದಲಿ' (ತೊ. ರಾ. iv 4-30) ಕಳೆಯಬೇಕಾಗುತ್ತದೆ.

ನಿರಶನವ್ರತ ಕೈಗೊಂಡು ಪ್ರಾರ್ಥಿಸಿದರೂ ಸಮುದ್ರರಾಜನು ಒಲಿಯದಿರಲು, ಅವನ ಸದರವನ್ನು ಕಂಡು 'ಚಟುಳ ವಿಲಯಾನಿಲ ಸಂಘಟಿತ ಸತ್ಕ್ರೋಧ ಪ್ರಭಾಧೂರ್ಜಟಿ'ಯಾಗುತ್ತಾನೆ ಶ್ರೀರಾಮ. ಇದೇ ರಾಮನು ಮಾಯಾಸೀತೆಯನ್ನು ಇಂದ್ರಜಿತು ಕತ್ತರಿಸಿದಾಗ, ನಿಜವರಿಯದೆ "ಇನ್ನು ಹಗೆಯನು ಕೊಂದು ಕಾಂಬ ಮಹೋನ್ನತಿಕೆಯೆನಗಾವುದಕಟ?" ಎಂದು ವಿಷಾದಿಸುವುದೂ, ರಣರಂಗದಲ್ಲಿ ನಿಶ್ಚೇಷ್ಟಿತನಾಗಿ ಬಿದ್ದ ಲಕ್ಷ್ಮಣನು ಹತನಾದನೆಂದೇ ಭ್ರಮಿಸಿ "ನಿನ್ನನ್ನು ನನಗೆ ಕೈಯೆಡೆಯ ಶಿಶುವೆಂದಿತ್ತ ಸುಮಿತ್ರಾದೇವಿಗೆ ಇನ್ನೇನೆನ್ನಲಿ?"—ಎಂದು ಅಳಲುವುದೂ ಮಾನವಸಹಜವಾಗಿದೆ, ಇಲ್ಲಿನ ಚಿತ್ರಣ ಸರಸವೂ ಹೃದಯಂಗಮವೂ ಆಗಿದೆ.

ಕಾಳಗದಲ್ಲಿ ದಶಕಂಠನ ಶಿರಗಳನ್ನು ಕಡಿಕಡಿದು ಸೋತು ಬಳಲಿದಾಗ 'ಸಾಕು ಮಾತಳಿ, ನಾವು ಸಮಿಾಕ ಬಾಹಿರರು, ಅರಿಶಿರಂಗಳ ನೂಕಿ ಬೇಸತ್ತೆವು, ಶರಂಗಳ ಸೋಲವೆಮಗಾಯ್ತು ತೆರಳು ನೀನು'' ಎಂದು ಸಾರಥಿ ಮಾತಳಿಗೆ ನುಡಿಯುವುದು, ತಮ್ಮನೊಡನೆ ಇದೇ ಸಂದರ್ಭದಲ್ಲಿ '' ನೀನು ನನ್ನೊಡನೆ ಬಹಳ ಬಳಲಿದೆ, ನೀ ಪುರಕೆ ತೆರಳು; ಸೀತೆಯನು ಕಳೆದುಕೊಂಡು ನೃಪ (ರಾಮ) ನು ಅಜ್ಞಾತನಾದನು, ನಾ ಕಾಣೆ ಎಂದು ಮಾತ್ರ ನುಡಿ"—ಎಂದು ಶಸ್ತ್ರತ್ಯಾಗ ಮಾಡುವುದು — ಎಲ್ಲವೂ 'ಶ್ರೀರಾಮನೂ ಹೀಗಾಡಬೇಕಾಯಿತಲ್ಲಾ!" ಅಥವಾ "ಇಂತಹ ರಾಮನೂ ದೇವೋತ್ತಮನೆಂದರೆ ಹೇಗೆ?''— ಎಂಬ ಉದ್ಗಾರ ಮೂಡಿಸುವಂತಿವೆ. ಇಂತಹ ರಾಮನಲ್ಲಿ ಮಾತಳಿಯು ಪೌರುಷವನ್ನು ಕೆರಳಿಸಬೇಕಾಗುತ್ತದೆ. ಎಂದರೆ—ಇದನ್ನು 'ನರನಾಟಕ' ಎಂದು ನಂಬುವುದೂ ಕಷ್ಟವಾಗುತ್ತದೆ. ಇಂತಹ ಸನ್ನಿವೇಶ, ಸ್ಥಿತಿ

ನಿರ್ಮಾಣ ಮಾಡಿ—ಅಲೌಕಿಕ ಮೂರ್ತಿಗೆ ಮಾನವತೆಯನ್ನು ತುಂಬಿ—ಮನುಷ್ಯ ಸಹಜವಾದ ಭಾವ-ವಿಭಾವಗಳ ಮೂಲಕ ರಸೋತ್ಪತ್ತಿಗೆ ನೆರವಾಗುವುದರಿಂದಲೇ – ಕುಮಾರ ವಾಲ್ಮೀಕಿಯ ಶ್ರೀರಾಮನ ದಿವ್ಯಕಥೆಯು ಕೇವಲ 'ಪುರಾಣಕೃತಿ'ಯಾಗಿ ಉಳಿಯದೆ, ಸರಸ ಕಾವ್ಯಸೃಷ್ಟಿಯಾಗಿ ಮೆರೆಯುತ್ತಿದೆ.

ಹೀಗೆ ದಿವ್ಯಲೀಲೆಯನ್ನು ವರ್ಣಿಸ ಹೊರಟವನಾದರೂ, 'ಮನುಜಾವತಾರದ ಸೊಗಸನ್ನು' ತನ್ನಿಂದ ಸಾಧ್ಯವಿದ್ದಷ್ಟು ಕಲಾತ್ಮಕವಾಗಿ ನಿರೂಪಿಸಿದ್ದರಲ್ಲಿ ಕುಮಾರ ವಾಲ್ಮೀಕಿಯ ಸಾರ್ಥಕತೆ ಇದೆ; ತೊರವೆ ರಾಮಾಯಣದ ವಿಶಿಷ್ಟತೆ ಇದೆ.

## ಕುಮಾರ ವಾಲ್ಮೀಕಿಯ ಶೈಲಿ

ರಾಮಾಯಣದ ವಸ್ತು ವಿಸ್ತಾರವನ್ನೂ, ಅದರಲ್ಲಿನ ಉಪಾಖ್ಯಾನಗಳ ವಿಪುಲತೆಯನ್ನೂ ಕಂಡರೆ ಅದನ್ನು ಅನುವಾದಿಸುವುದಾಗಲಿ, ಸಂಗ್ರಹಿಸುವುದಾಗಲಿ, ರೂಪಾಂತರಿಸಿ -ಹೇಳುವುದಾಗಲಿ ಸಾಮಾನ್ಯ ಕವಿಗಳಿಗೆ ಒಂದು ಪಂಥಾಹ್ವಾನವೇ ಸರಿ. ಪ್ರಮಾಣ ಜ್ಞಾನವಿಲ್ಲದ, ಕುತೂಹಲ ಕೆರಳಿಸುವಂತೆ ಕಥೆ ಹೇಳಲಾರದ ಲಿಪಿಕಾರನು ತನ್ನ ಸಾಹಸದಲ್ಲಿ ತೊಡಕಿಗೆ ಸಿಕ್ಕಿ ಮುಗ್ಗರಿಸುವ ಸಂಭವವೇ ಹೆಚ್ಚು.

ಮಹಾಕವಿ ವಾಲ್ಮೀಕಿಯ ವಸ್ತುವನ್ನು ಆಧರಿಸಿಕೊಂಡು ಕನ್ನಡದಲ್ಲಿ ಶ್ರೀರಾಮಕಥೆಯನ್ನು ಮೊತ್ತಮೊದಲಿಗೆ ಹೇಳಹೊರಟ ಭಕ್ತಕವಿ ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಆದಿಕಾವ್ಯದ ರಸವೈಭವ, ಗಾಂಭೀರ್ಯ, ಸಮತೂಕ, ಲೋಕದರ್ಶನ –ಮೊದಲಾದ ಅಪೂರ್ವ ಗುಣಗಳನ್ನು ಅರಸುವ ವಿಫಲ ಪ್ರಯತ್ನ ಮಾಡದೆ, ಆ ಮಹಾಕಾವ್ಯದ ಕಥೆಯನ್ನು ತನ್ನ

ಕೃತಿಯ ಚೌಕಟ್ಟಿನಲ್ಲಿ ತಂದು ನಿಲ್ಲಿಸಿದ ಕನ್ನಡದ ಕವಿಯ ಸಾಹಸಕ್ಕೆ ತಲೆದೂಗಿ ಇವನ ಕಥನ ಕೌಶಲದ ವೈಶಿಷ್ಟ್ಯಗಳನ್ನು ಗುರುತಿಸುವುದೇ ಸೂಕ್ತ.

## ಸಂಕ್ಷಿಪ್ತತೆ

ಸಾಮಾನ್ಯ ಕವಿಗಳಿಗೆ ಸಂಕ್ಷಿಪ್ತತೆಯು ಒಂದು ಸುಲಭದ ಅಡ್ಡದಾರಿ. ಕಥೆಯನ್ನು ಸಂಗ್ರಹಿಸಿ ಹೇಳಿ, ಅಥವಾ ಸೂಚಿಸಿ, ಕೈತೊಳೆದುಕೊಳ್ಳುವುದರಲ್ಲಿಯೇ ಅವರಿಗೆ ತೃಪ್ತಿ. ವಾಲ್ಮೀಕಿಯ ಮಹಾಕಾವ್ಯ ಕುಸುಮದಲ್ಲಿ ಒಂದೊಂದೂ ಸುಂದರ ದಳದಂತೆ ಶೋಭಿಸುವ ಉಪಾಖ್ಯಾನಗಳು ಕನ್ನಡದ ಕುಮಾರ ವಾಲ್ಮೀಕಿಯ ರಾಮಾಯಣದಲ್ಲಿ ಅಲ್ಲಲ್ಲಿ ಚಿಕ್ಕಪುಟ್ಟ ಟಿಪ್ಪಣಿಗಳ ರೂಪದಲ್ಲಿ ಮೈದೋರಿರುವುದು ಅನಿವಾರ್ಯವಾಗಿದೆ. ಇಂತಹ ಸಂಕ್ಷಿಪ್ತತೆಗೆ ಕೆಲವು ಮಾದರಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

| ಉಪಾಖ್ಯಾನಗಳು | ವಾಲ್ಮೀಕಿ ರಾಮಾಯಣ | ತೊರವೆ ರಾಮಾಯಣ |
|---|---|---|
| ೧ ವ್ಯಾಧನು ಕವಿಯಾದ ಕಥೆ | ಇಲ್ಲ | ೨ ಷಟ್ಪದಿಗಳು |
| ೨ ಕಲುಷಕಾನನದ ಕಥೆ | ೭ ಶ್ಲೋಕಗಳು | ೨ ಷಟ್ಪದಿಗಳು |
| ೩ ವಾಮನಾವತಾರದ ಕಥೆ | ೨೧ ಶ್ಲೋಕಗಳು | ೨ ಷಟ್ಪದಿಗಳು |
| ೪ ಗಂಗಾವತರಣದ ಕಥೆ | ೧೯೮ ಶ್ಲೋಕಗಳು | ೨ ಷಟ್ಪದಿಗಳು |
| ೫ ಅಹಲ್ಯಾವೃತ್ತಾಂತ | ೪೫ ಶ್ಲೋಕಗಳು | ೨ ಷಟ್ಪದಿಗಳು |
| ೬ ಹರಧನುಸ್ಸಿನ ಪೂರ್ವಕಥೆ | ೧೭ ಶ್ಲೋಕಗಳು | ೫ ಷಟ್ಪದಿಗಳು |
| ೭ ವೈಶ್ಯಮುನಿ ಪುತ್ರನ ಕಥೆ | ೫೩ ಶ್ಲೋಕಗಳು | ೧೯ ಷಟ್ಪದಿಗಳು |
| ೮ ವಾಲಿ–ಸುಗ್ರೀವರ ವೈರ ವೃತ್ತಾಂತ | ೪೯ ಶ್ಲೋಕಗಳು | ೧೦ ಷಟ್ಪದಿಗಳು |
| ೯ ದುಂದುಭಿಯ ಕಥೆ | ೫೧ ಶ್ಲೋಕಗಳು | ೭ ಷಟ್ಪದಿಗಳು |
| ೧೦ ಸುಪಾರ್ಶ್ವನ ಕಥೆ | ೨೯ ಶ್ಲೋಕಗಳು | ೨ ಷಟ್ಪದಿಗಳು |

ಕುಮಾರ ವಾಲ್ಮೀಕಿಯು ಆದಿಕಾವ್ಯದ ರೀತಿಯನ್ನು ಅನುಸರಿಸಿ ತನ್ನ ಕೃತಿಯನ್ನು ಆರು ಕಾಂಡಗಳನ್ನಾಗಿ ವಿಭಾಗಿಸಿಕೊಂಡಿದ್ದಾನೆ. ಎರಡು ಕೃತಿಗಳ ಕಾಂಡ–ಪ್ರಮಾಣಗಳನ್ನು ಹೋಲಿಸಿ ನೋಡಬಹುದು.

| | ವಾಲ್ಮೀಕಿ ರಾಮಾಯಣ | | ತೊರವೆ ರಾಮಾಯಣ | |
|---|---|---|---|---|
| ಕಾಂಡ | ಸರ್ಗಗಳು | ಶ್ಲೋಕಗಳು | ಸಂಧಿಗಳು | ಷಟ್ಪದಿಗಳು |
| ಬಾಲಕಾಂಡ | 77 | 2256 | 17 | 599 |
| ಅಯೋಧ್ಯಾಕಾಂಡ | 119 | 4415 | 7 | 263 |
| ಅರಣ್ಯಕಾಂಡ | 75 | 2732 | 12 | 518 |
| ಕಿಷ್ಕಿಂಧಾಕಾಂಡ | 67 | 2620 | 12 | 401 |
| ಸುಂದರಕಾಂಡ | 68 | 3006 | 9 | 508 |
| ಯುದ್ಧಕಾಂಡ | 131 | 5990 | 55 | 2814 |
| ಒಟ್ಟು | 537 | 21019 | 112 | 5103 |

ವಾಲ್ಮೀಕಿ ರಾಮಾಯಣದಲ್ಲಿ ಬಾಲಕಾಂಡವು ಅತಿ ಚಿಕ್ಕದು. ಅಯೋಧ್ಯಾಕಾಂಡ ಬಾಲಕಾಂಡದ ಸುಮಾರು ಎರಡರಷ್ಟು ವಿಸ್ತಾರವಾಗಿದೆ. ಈ ಕಾಂಡದಲ್ಲಿ ನಮಗೆ ದೊರೆಯುವುದು ದಶರಥನ ಸಂಸಾರದ ಹತ್ತು ದಿನಗಳ ಕಥೆ ಮಾತ್ರ. ಆದರೆ ಅಯೋಧ್ಯಾಕಾಂಡದಲ್ಲಿರುವಷ್ಟು ಹೃದಯಸ್ಪರ್ಶಿಯಾದ ರಸಭರಿತ ಸನ್ನಿವೇಶಗಳು ಬಹುಮುಖ ಜೀವನದರ್ಶನ, ಇನ್ನೆಲ್ಲಿಯೂ ದೊರೆಯುವುದಿಲ್ಲ.

ಕುಮಾರ ವಾಲ್ಮೀಕಿಯು ಬಾಲಕಾಂಡದ ಗಾತ್ರವನ್ನು ಹಿಗ್ಗಿಸಿ ಅಯೋಧ್ಯಾಕಾಂಡವನ್ನು ಅನುಚಿತವಾಗಿ ಸಂಕ್ಷಿಪ್ತಗೊಳಿಸಿದ್ದಾನೆ. ವಾಲ್ಮೀಕಿ ರಾಮಾಯಣದಲ್ಲಿ ಅಯೋಧ್ಯಾಕಾಂಡಕ್ಕೆ ಗಾತ್ರದಲ್ಲಿ ಎರಡನೆಯ ಸ್ಥಾನವಿದ್ದರೆ, ತೊರವೆ ರಾಮಾಯಣದಲ್ಲಿ ಅದಕ್ಕೆ ಕೊನೆಯ ಸ್ಥಾನ ದೊರೆತಿದೆ. ವಾಲ್ಮೀಕಿ ರಾಮಾಯಣದಲ್ಲಿಲ್ಲದ 'ಸೀತಾ ಸ್ವಯಂವರ ವರ್ಣನೆ'ಯ ಮೂಲಕ ಬಾಲಕಾಂಡವನ್ನು ಉಬ್ಬಿಸಿದ ಕುಮಾರ ವಾಲ್ಮೀಕಿಯು ಆದಿಕಾವ್ಯದ ಅಯೋಧ್ಯಾ ಕಾಂಡದಲ್ಲಿನ ರಸಭರಿತವೂ ಲೋಕಸಹಜವೂ ಆದ ದಶರಥನ ಸಂಸಾರದ ಚಿತ್ರಣ, ಭರತನ ಅಸಾಧಾರಣ ವ್ಯಕ್ತಿತ್ವ ನಿರೂಪಣೆಗಳ ಕಡೆಗೆ ಕೊಟ್ಟ ಗಮನ ಸಾಲದು ಎನಿಸುತ್ತದೆ. ಆದಿಕಾವ್ಯದ ೪೭ ಸರ್ಗಗಳಲ್ಲಿ ೧೪೯೨ ಶ್ಲೋಕಗಳಲ್ಲಿ ಚಿತ್ರಿತವಾದ ಭರತನ ಕನಸು, ಅವನ ಪ್ರಯಾಣ, ಸಂತಾಪಗಳೆಲ್ಲವನ್ನೂ, ಭರತ-ಕೈಕೆ, ಭರತ-ಕೌಸಲ್ಯೆ, ಭರತ-ರಾಮ ಸಂಭಾಷಣೆಗಳೆಲ್ಲವನ್ನೂ—ಕುಮಾರ ವಾಲ್ಮೀಕಿಯು ಕೇವಲ ೩೫ ಷಟ್ಪದಿಗಳಲ್ಲಿ ವರದಿ ಮಾಡಿ ಮುಗಿಸಿದ್ದಾನೆ.

ಶ್ರೀರಾಮನ ಅಲೌಕಿಕ ಕಥೆಗೇ ಸಂಪೂರ್ಣ ಗಮನಹರಿಸಿ ಉಳಿದ ಲೌಕಿಕ ಘಟನೆಗಳ ಬಗೆಗೆ ಸಾಕಷ್ಟು ಆಸಕ್ತಿವಹಿಸದ್ದರಿಂದ ಕುಮಾರ ವಾಲ್ಮೀಕಿಯ ಕೃತಿಯು, ಭಕ್ತರ ಅಚ್ಚುಮೆಚ್ಚಿನ ರಾಮಕಥೆಯಾಗಿ ಮೆರೆದರೂ, ರಸಿಕರ ನಿರೀಕ್ಷೆಯ ಮಹಾಕಾವ್ಯದ ಮಟ್ಟವನ್ನೇರುವುದು ಶಕ್ಯವಾಗಲಿಲ್ಲ. ಯುದ್ಧಕಾಂಡವನ್ನು ಬರೆಯುವಲ್ಲಿ ತನ್ನ ಶಕ್ತಿಯನ್ನೆಲ್ಲ ದುರ್ವ್ಯಯ ಮಾಡಿದಂತೆ ತೋರುವ ಕುಮಾರ ವಾಲ್ಮೀಕಿಯು ರಾಮಾಯಣದಲ್ಲಿ ದೊರೆಯುವ ಮಾನವೀಯ ಅಂತರಂಗದ ಚಿತ್ರಣ, ವೈವಿಧ್ಯ, ಸಂಕೀರ್ಣತೆ, ಸಂಘರ್ಷಗಳನ್ನು ತನ್ನ ಕೃತಿಯಲ್ಲೂ

ಚಿತ್ರಿಸುವ ಕಡೆಗೆ ಹೆಚ್ಚಿನ ಲಕ್ಷ್ಯವಹಿಸಿದ್ದರೆ, ವಾಲ್ಮೀಕಿ ರಾಮಾಯಣದಂತೆ ಸಹಜಸುಂದರವಾದ ಪ್ರಾಕೃತಿಕ ದೃಶ್ಯ ವೈಭವಗಳನ್ನು ನಿರೂಪಿಸುವ ಕಡೆಗೆ ಗಮನಹರಿಸಿದ್ದರೆ, ತೊರವೆ ರಾಮಾಯಣವು ರಸಿಕರ ಆದರಕ್ಕೆ ಇನ್ನಷ್ಟು ಪಾತ್ರವಾಗುತ್ತಿತ್ತು ಎನಿಸುವುದು ಸಹಜ.

ಶ್ರೀರಾಮನಾಮ ಮಹಿಮೆಯನ್ನು ಹೇಳಹೊರಟ ಕವಿಗೆ ಪಂಡಿತರಂಜನೆಗಿಂತಲೂ ಪಾಮರೋದ್ಧಾರವೇ ಉದ್ದೇಶ. ಇಲ್ಲಿ ವ್ಯಂಗ್ಯಕ್ಕಿಂತಲೂ ವಾಚ್ಯಕ್ಕೆ ಪ್ರಾಧಾನ್ಯ. ಸರಳತೆ, ನೇರವಾದ ಕಥನಗತಿ, ಅರ್ಥವ್ಯಕ್ತಿ—ಇವು ಕುಮಾರ ವಾಲ್ಮೀಕಿಯ ಅಭಿ ವ್ಯಕ್ತಿಯ ಮುಖ್ಯ ಗುಣ ಮತ್ತು ಶಕ್ತಿ. ಹಲವು ಪಂಡಿತ ಮಾನ್ಯ ಕವಿಗಳ ಪಾಂಡಿತ್ಯ ಪ್ರದರ್ಶನೋತ್ಸಾಹದ ವರ್ಣನಾ ವೈಖರಿ, ಅಲಂಕಾರ ಚಮತ್ಕಾರ, ಅಷ್ಟಾದಶ ವರ್ಣನೆಯ ವ್ಯಾಮೋಹ, ಕಥೆಯ ಮಂದಗತಿ—ಇವುಗಳನ್ನೆಲ್ಲ ಗಮನಿಸಿ ದಾಗ ಕುಮಾರ ವಾಲ್ಮೀಕಿಯ ಸರಳತೆ ನಮಗೆ ಹೆಚ್ಚು ಪ್ರಿಯ ವೆನಿಸುತ್ತದೆ.

## ನುಡಿ, ನಾಣ್ನುಡಿಗಳ ಸಂಪತ್ತು

ಕುಮಾರ ವಾಲ್ಮೀಕಿಯ ಶಬ್ದಸಂಪತ್ತು ದೊಡ್ಡದು. ನಿರರ್ಗಳ ವಾಗಿ ಮನಸೆಳೆಯುವ ಅವನ ಕಾವ್ಯವು ಪದ ರಮ್ಯತೆಯಿಂದ ನಮ್ಮನ್ನು ಸಂತಸಗೊಳಿಸುತ್ತದೆ. ಅಚ್ಚಗನ್ನಡದ ಚೆಲುವು, ಸಂಸ್ಕೃತ ಪದಗಳ ವೈಖರಿ, ಕನ್ನಡ–ಸಂಸ್ಕೃತ ಪದಗಳ ಸರಸ ಸಹ ಯೋಗ, ಪದಬಂಧದಲ್ಲಿ ಹೊಸಮಿರುಗು, ಚಮತ್ಕಾರ, ಹೆಸರು ಹೇಳುವ ಬಿನ್ನಾಣ, ಕೂಡುನುಡಿಗಳ ಕೊಂಡಾಟ—ಎಲ್ಲವೂ ತೊರವೆ ರಾಮಾಯಣದಲ್ಲಿ ವಿಪುಲವಾಗಿವೆ.

ಮೂಗಕ್ಕೆಯಲಿ ಮರುಗು, ಗೋನಾಳಿಯನು ಗೋರು, ಹದನ ಹವಣೇನೆಂದರಿಯೆ, ನುಡಿಗೆ ಹೊದ್ದದು ಹಳಿವು, ಆತ್ತುಂಬಹರೆಯ, ಮೂಗುಬ್ಬಸವ ಮಾಡು, ತೂಗದಿರ್ದಡೆ ತೋಟಿಯೇಕೆ? ಕಟ್ಟಿದ ಕರುವಂತಾಗು, ಹೆಗಲು ಬಡಿತರ ಹೇಳದಿರು ಇವೆಲ್ಲ ಕುಮಾರ ವಾಲ್ಮೀಕಿಯ ಕಾವ್ಯದಲ್ಲಿ ತುಂಬಿದ ಅಚ್ಚಗನ್ನಡದ ಚೆಲುವಿಗೆ ಉದಾಹರಣೆಗಳಾಗಿವೆ.

ಮಹಾದಿವೌಕಸಪ್ರಚುರ ಭಾಷಾ ಕವಿ ಜನೋತ್ತಂಸ, ವಾರ್ಧಕಕಾಲ ವಿಕೃತಾಕಲಿತ ಪಲಿತ ಜರಾತಿರೇಕ, ಸುರವಿಷ್ಟ ಪದ ಸುರಪತಿಯ ಮಣಿಮಯದ ವಿಷ್ಟರದ ಸಿರಿ, ಅರುಣಪಟ ಪರಿಧಾನ ಶೌರ್ಯಾಭರಣ, ವಿಬುಧರಿಪು ವೇತಂಡ ಪಂಚಾನನ, ಬಹಳ ಬಾಹಾ ಸ್ಫೋಟನಾಕಂಪಿತ ಸರೋಜ ಭವಾಂಡ ಮಂಡಲ,--ಇವೆಲ್ಲ ಕೃತಿಯಲ್ಲಿನ ಸಂಸ್ಕೃತ ಪದಗಳ ವೈಖರಿಯನ್ನು ಸೂಚಿಸುತ್ತವೆ.

ಇಕ್ಷ್ವಾಕುವಂಶದ ಕಡಲು ಬರತುದು, ಅನ್ವಯದ ಲಲಿತಲತೆ ಕುಡಿಗೊಂಬುದೇ, ಕೊಳನು ಕೂರ್ಮನ ಬೆನ್ನಿಗಿಳಿದಿದು, ನನ್ನಿಕಾರರ ದೇವ, ಅಟ್ಟುವಾಸತ್ತಿಸ ಸಮುದ್ರಕೆ ಕಟ್ಟಿನೀನು, ನಗೆಯನಯನದ, ಸನ್ನೆವಾತಿನ ಸೊಗಸಿನಬಲಾಜನರು, ಚಿಂತಾ ಬಾಲಕಿಯ ಬಳಿವಿಡಿದು ಹೊಕ್ಕನು ತನ್ನ ಮಂದಿರವ, ಕುಡಿದವರುಣಾಂಬುವನು ಮರದುದಿಗಡರಿ ರಕ್ಕಸವಕ್ಕಿಗಳು—ಇಂತಹ ನುಡಿಗಡಣದಲ್ಲಿ ಸಂಸ್ಕೃತ ಕನ್ನಡ ಪದಗಳ ಸಹಯೋಗ ಸರಸವಾಗಿದೆ, ಶಯ್ಯೆ ಹದವಾಗಿದೆ.

ಪದಬಂಧದಲ್ಲಿ ಹೊಸಮಿರುಗು ಚಮತ್ಕಾರಗಳನ್ನು ಮೆರೆಯುವುದರಲ್ಲೂ ಕುಮಾರ ವಾಲ್ಮೀಕಿ ಎತ್ತಿದ ಕೈ—ಕೆಲವು ಉದಾಹರಣೆಗಳನ್ನು ಗಮನಿಸಿರಿ—ಜಾತಕರಹಿತನು ಜನಿಸಿದನು, ನಿಜ

ವಂಶ ವಂಧ್ಯಾಮಾನಿನಿಗೆ ಪತಿಯಾಜಿನೇ ? ಇಳೆಯರಾಯರ ಬಾಯ್ಗಳಲಿ ಬೆರಳಾಡಿಸಿದನು, ಕುಸುಮಾಯುಧನ ಖಂಡೆಯಕೆ ತೆಕ್ಕದ ಮುನಿಪ, ಮಾನಭಂಗ ಸ್ಥಳಕ್ಕೆ ನಾಯಕನಾಗು, ದಾನ ವಿಲ್ಲದ ಧನಪತಿಯ ಸುಮ್ಮಾನ.

ಪೌರಾಣಿಕ ಕಥಾಪರಿಜ್ಞಾನ ಮತ್ತು ಹಿರಿದಾದ ಶಬ್ದಭಂಡಾರ ಗಳನ್ನು ಗಳಿಸಿಕೊಂಡ ಕುಮಾರ ವಾಲ್ಮೀಕಿಯು ಕೆಲವು ಪಾತ್ರಗಳ ಹೆಸರುಗಳನ್ನು ಹೇಳುವುದರಲ್ಲೂ ವಿಶೇಷತೆ ಇದೆ....

ಶ್ರೀರಾಮ—ಜನಕನ ಕನ್ನಿಕೆಯಗಂಡ, ಸೀತಾಲತಾಂಗಿಯ ರಮಣ, ಚಂಡಾಂಶು ವಂಶೋದ್ಭವ....

ಲಕ್ಷ್ಮಣ—ಸೀತಾಪ್ರಾಣನಾಥ ಸಹೋದರ, ಮಗಧ ಚಕ್ರೇಶ್ವರನ ಮೋಹದ ಮಗಳ ಮಗ.

ಸೀತೆ—ಆದಿ ಮಾಯಾ ಮಹಿಮೆ, ಕ್ಷೀರೋದಧಿಯ ನಂದನೆ, ವೇದಮಾತೆ, ನರಭಾಮಿನಿಯ ರೂಪಕದ ಆದಿಶಕ್ತಿ.

ಜಾಂಬವ—ತಾವರೆಯ ನಂದನನ ನಂದನ, ಬಿಡೌಜಸುತಸುತ.

ಇಂದ್ರ—ನೂರುಯಜ್ಞದ ಜಾಣ.

ಇಂದ್ರಜಿತು—ಸುರಪನ ಕಟ್ಟಿತಂಡವ, ಸ್ಥಾಣು ಶೈಲೋದ್ಧರಣ ಸುತ.

ವಿಶೇಷಣಗಳನ್ನು ಜೋಡಿಸಿದ ಕೂಡುನುಡಿಗಳ ಕೊಂಡಾಟ ದಲ್ಲೂ ಕುಮಾರ ವಾಲ್ಮೀಕಿ ಹಿಂದಿಲ್ಲ—ನಾರದ—ನೀತಿವಿಶಾರದ, ಆದಿನಾರಾಯಣ—ಶ್ರುತಿಸಂವಾದ ಪಾರಾಯಣ; ಹರಿಭಕ್ತಿ ಭೂಷಣ—ವರವಿಭೀಷಣ, ಲಂಕಾವೀತಿಹೋತ್ರ—ರಣತ್ರಿನೇತ್ರ, ರಣಕೆ ನೀಲಗ್ರೀವ—ರಿಪುಮಾರಣಕೆ ಕಾಲಗ್ರೀವ—ಸುಗ್ರೀವ—ಇಂತಹ ಉದಾಹರಣೆಗಳನ್ನು ಬಹಳಷ್ಟು ಕೊಡಬಹುದು.

## ಪ್ರಾದೇಶಿಕತೆ

ಕುಮಾರ ವಾಲ್ಮೀಕಿಯ ಈ ಕೆಲವು ನುಡಿಗಳಲ್ಲಿ ದೇಶೀಯತೆ, ಅನ್ಯಭಾಷಾ ಪ್ರಭಾವಗಳು ವ್ಯಕ್ತವಾಗುತ್ತವೆ.

ಪರುಠವಣೆ, ಸೀವಟ, ಡಿಳ್ಳಾಯಿ, ಐಲಪೈಲ, ಚಡ್ಡಣ, ದಕ್ಕಡ, ಡೋವಿಗೆ, ಸುರಾಡ, ಅಳಿಜುಳುಕು, ಜನಾಖಿ, ಜೀಬಿ, ಕುಸ್ತರಣೆ, ಗೊಂಗಲ(ಸ), ನಿಹಾದಿ, ಚಪೇಟ, ಕೇವಟ, ಜತ್ತರಟ್ಟ, ತಿದ್ದುಡಿಕೆ, ತಿತ್ತಿರಿ, ಕಾರವು, ಗಂಗಸ, ಸಗ್ಗಳಿ, ಸಕ್ಕಜ.

## ನಾಣ್ಣುಡಿಗಳು

ಲೋಕಾನುಭವ ಸಾರರೂಪವಾದ ನಾಣ್ಣುಡಿಗಳು, ಹೇಳಿಕೆಗಳು ತೊರವೆ ರಾಮಾಯಣದಲ್ಲಿ ಸಾಕಷ್ಟು ತುಂಬಿಕೊಂಡಿವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಕೊಡಲಾಗಿದೆ:

ಸತಿಯರ ಬಲೆಗೆ ಸಿಲುಕದವರಾರು? ಮದನನಾರ್ಗೊಳ್ಳಿದನು? ಮಾಯೆಯ ಕಟ್ಟಿಗೊಳಗಾಗದವರಾರು? ಕುಜನರ ಜಿಹ್ವೆ ಕಡು ಕೂರಿತು. ಕಾಲಗೆ ಕರುಣೆಯಿಲ್ಲ; ಸುಲಭವೇ ರವಿ ತಾಮಸಿಗೆ? ಮಿನ್ನುಲಿಗನೌಕಿದಡೆ ಅಳುಕುವುದೆ ಮಕರೇಶ? ಬಾಯಂ ಹವಣಿಂಗಳವಡದ ಬಲುದುತ್ತನಂಗೈಗಳಲಿ ಧರಿಸು; ಜೂಜು ಸೋತಡೆ ಸೋಲುವುದೆ ಮರುಜೂಜು! ಇರುಳುಗನ್ನದ ಕೆಲಸ, ದಿವದಾಚರಣೆ ಧರ್ಮದ ವಿರಸ; ನುಡಿಯೆ ನಾಲಗೆಯಿಲ್ಲ; ಬಸಿದ ಶೂಲಕೆ ಸವಣನನು ಸೇರಿಸು; ನರಿ ಸುಮ್ಮಾನದಲಿ ಕಟಕವನು ಹೊಕ್ಕಂತೆ; ಹೇನನೊರಸುವೊಡೇಕೆ ಶರಸಂಧಾನ? ರೋಗಿಗೌಷಧ ಸೊಗಸುವುದೆ? ಮರುಳಿಗೆತ್ತಣ ಮಂಡನವು? ಚೋರ ರಂಗದ ಮಾತು ತಳವರ ಕೇರಿಯಲಿ ಭೂಷಣವೆ? ಕರಿಯ

ನಿಟ್ಟೌಡಲನ ಮರವನು ಮರೆಯು ಹೊಗುವರೆ? ಇರಿತಕಂಬರ ವಳುಕುವುದೇ? ಮೂರುದಿವಸದ ಹಗರಣಕೆ ಹರಿಸದಿರು ಗಡ್ಡವನು....

## ವರ್ಣನಾ ವೈಭವ

ಕುಮಾರ ವಾಲ್ಮೀಕಿಯ ವರ್ಣನೆಗಳಲ್ಲಿ ಕವಿಸಮಯಗಳು ತುಂಬಿಕೊಂಡಿದ್ದರೂ, ಎದ್ದುಕಾಣುವ ಹೊಸತನವಿಲ್ಲದಿದ್ದರೂ, ಅನ್ಯಕವಿಗಳ ಪ್ರಭಾವ ಸ್ಪಷ್ಟವಾಗಿದ್ದರೂ, ಪರಿಮಿತತ್ವ ಮತ್ತು ಅರ್ಥವ್ಯಕ್ತಿಗಳಿಂದಾಗಿ ಅವು ನಮ್ಮನ್ನು ತಣಿಸುತ್ತವೆ, ದಣಿಸುವುದಿಲ್ಲ. ಕೆಲವು ನಿದರ್ಶನಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ.

ತಂಗಾಳಿ

ಸುಳಿದನೊಯ್ಯನೆ ಶೈತ್ಯ ಸಲಿಲೋ
ಚ್ಚಲಿತ ಧೂತ ತುಷಾರ ಭಾರಾ
ಕಲಿತ ದಳಿತ ಸರೋಜ ಗಂಧ ಪರಾಗ ಯೋಗದಲಿ
ತಿಳಿಗೊಳನ ತಡಿವಿಡಿದು ಮಂದ
ಸ್ಖಲಿತ ಮಾರುತನಾ ವನಾಧ್ವದ
ಬಳಲಿಕೆಯ ಬಿಸಜಕುಲಾನ್ವಯ ರಂಗವೀಧಿಯಲಿ

(ತೊ.ರಾ. II 4–21)

ಗಂಗಾನದಿ

ಶ್ರುತಿ ಸಮಾಜ ತರಂಗಮಯ ಪೂ
ರಿತ ಸುಧೋಪ ಸಲಿಲಮಯ ಸಂ
ಭೃತ ಸುಮುಕ್ತಾ ಫಲ ನಿಭೋತ್ಕರ ಸೈಕತಾವಳಿಮಯ
ಕೃತ ಜಗತ್ಪಾವನಮಯ ಪ್ರ
ಚ್ಯುತ ಭವಾಖಿಲ ದುರಿತಮಯ ಶೋ
ಭಿತೆಯ ಸುಮನ ಸ್ತುತೆಯ ಕಂಡನು ರಾಮ ಜಾಹ್ನವಿಯ

(ತೊ.ರಾ. I 12–9)

## ಮಳೆಗಾಲ

ತೊಟ್ಟುದೋ ನಭ ಕವಚವನು ನೆಲ
ಕಟ್ಟಿ ಬಿಗಿದರೊ, ಸುರರು ನಿರಿವಿಡಿ
ದುಟ್ಟಳೋ ಜಲದಾಗಮ ಶ್ರೀ ನೀಲಮಯಪಟವ
ಮಟ್ಟ ಮರಕತಶಿಲೆಯ ನೀಲಿಯ
ಬೆಟ್ಟದಿರವೆಂಬಂತೆ ಜಂಪಳ
ವಿಟ್ಟು ರುಡಿದುದು ಕಾರ್ಮುಗಿಲು ಕತ್ತರಿಸೆ ಕುಂಭಿನಿಯ

(ತೊ.ರಾ. IV 6–3)

## ಮುಗಿಲುಗಳ ವೈವಿಧ್ಯ

ದೊರೆ ಮುಗಿಲು, ತೆರೆ ಮುಗಿಲು ನಿಡು ಮೋ
ಹರದ ಮುಗಿಲುಪ್ಪರದ ಮುಗಿಲು
ಬ್ಬರದ ಜಾಡಿಯ ಜೋಡಿಗಳ ಜಂಗಳದ ಮುಗಿಲಿನಲಿ

(ತೊ,ರಾ. IV 6–5)

ಯಾವ ಅಲಂಕಾರಾತಿಶಯವೂ ಇಲ್ಲದೆ, ಸರಳ ಶಬ್ದಗಳಿಂದಲೇ ನಮ್ಮ ಕಣ್ಣ ಮುಂದೆ ಚಿತ್ರವನ್ನು ನೇಯುವ ಕಲೆಯಲ್ಲಿ ಕುಮಾರ ವಾಲ್ಮೀಕಿ ಪಳಗಿದವನು.

ರಾಘವಾಶ್ರಮಕ್ಕೆ ಬಂದ ಶಬರರು ಶಬ್ದಗಳಲ್ಲಿ ಹೀಗೆ ಮೂಡಿದ್ದಾರೆ :

ಹೀಲಿಯುಡುಗೆಯ ಹೆಗಲ ಬಿಲು ಬಡಿ
ಗೋಲುಗಳ ಸಂಕಲೆಯ ನಾಯ್ಗಳ
ತೋಳಗುಂಜಿಯ ದಂಡೆಗಳ ಕಟಿತಟದ ಸುರಿಗೆಗಳ
ಬೋಳೆಗಳ ಮಿಟ್ಟೆಗಳ ದೀಹದ
ಸಾಳುವನಗಳಿಯಂಟುಗಳ ಶಬ
ರಾಳಿ ಬಂದುದು ಪರ್ಣಶಾಲೆಗೆ ಸೂರ್ಯವಂಶಜನ

(ತೊ.ರಾ. III 3–3)

ಅಶೋಕವನದಲ್ಲಿನ ಸೀತೆಯ ಚಿತ್ರಣ ಕಣ್ಣ ಮುಂದೆ ಕಟ್ಟು ವಂತಿದೆ:

ದೇವಿಯಿದ್ದಳು ಬಾಗಿದೊಡಲಿನ
ಕೈವೆರಳ ಹತ್ತುಗೆಯ ಕದಪಿನ
ಜೀವನವನುದುಗಲಿಪನಯನದ, ಮಣಿದ ಮಸ್ತಕದ
ತೀವಿದುಮ್ಮಳಿಕೆಗಳ ನಸಿದ ಕ
ಳೇವರದ ನಿಜಪತಿಯ ಪದ ರಾ
ಜೀವ ಯುಗಳದ ನೆನಹಿನಲಿ ನೋಡುತ ಮಹೀತಳವ

(ತೊ.ರಾ. V 5–31)

ಬೇಡನ ಬಾಣಕ್ಕೆ ಬಲಿಯಾಗಿ ಬಿದ್ದ ತನ್ನ ಪತಿಯನ್ನು ಕಂಡು ಅಳಲುತ್ತಿರುವ ಕೊಂಚೆ, ಋಷ್ಯಶೃಂಗನ ಆಶ್ರಮಕ್ಕೆ ಹೊರಟ ಸೊಬಗಿಯರು, ರಾವಣನ ಅಂತಃಪುರದಲ್ಲಿ ಸೆರೆಯಾದ ಸ್ತ್ರೀಯರು, ದಶಕಂಠನ ಆಸ್ಥಾನ ನುಗ್ಗಿದ ಶೂರ್ಪನಖಿ, ಸೀತೆಯ ಮನವನ್ನು ಸೋಲಿಸಿದ ಹೊಮ್ಮಿಗ, ರಾವಣನ ಸನ್ಯಾಸಿವೇಷ, ಯುದ್ಧಕ್ಕೆ ಶಸ್ತ್ರಧಾರಿಯಾಗಿ ಸನ್ನದ್ಧನಾಗಿ ನಿಂತ ಶ್ರೀರಾಮ—ಹೀಗೆ ಕುಮಾರ ವಾಲ್ಮೀಕಿಯ ಶಬ್ದ ಚಿತ್ರಣಗಳ ಪಟ್ಟಿಯನ್ನು ಇನ್ನಷ್ಟು ಉದ್ದ ಬೆಳೆಸಬಹುದು. ಪ್ರತಿಯೊಂದು ಚಿತ್ರಣವೂ ಆ ದೃಶ್ಯ ವನ್ನು ಕಣ್ಣಮುಂದೆ ಜೀವಂತ ನಿಲ್ಲಿಸುವಲ್ಲಿ ಸಫಲವಾಗಿದೆ ಎಂದು ಹೇಳಬೇಕು.

## ಅಲಂಕಾರೋಕ್ತಿಗಳು

ಪದಪಂಕೇಜ, ಪದಸರೋಜ ಭ್ರಮರ, ಮುಖ ಪದ್ಮ ಸದ್ಮ, ಕವಿರಾಜಹಂಸ, ದುರ್ವಾರ್ತೆಲತೆ, ಇಕ್ಷ್ವಾಕುವಂಶದ ಕಡಲು, ಪಾವನಪವನಮುನಿ, ಬಯಲ ಮೋಹದ್ವೀಪ, ಹರುಷಲತೆ ಲಂಬಿಸು, ರಘುಕುಲ ಸಮುದ್ರೋದ್ಧರಣ ಹಿಮಕರಣ, ಮನೋ ರಥ ಕುಜಕೆ ಕಠಿಣ ಕುಠಾರ, ಮಹಾದುಷ್ಟಾಂಗನರಸಾಹಿದಷ್ಟ,

ಮನುಕುಲಾಂಬರ ಗಗನಮಣಿ, ಫಲಿಸಿತಗ್ಗದ ಸತ್ಯತರು, ನೃಪಾಲನ ಜೀವಶರಧಿಗೆ ಬಡಬನೋ ಚಂದ್ರಮನೋ, ಸುತ ವಿಯೋಗದ ಶೋಕನದಿ ನಿಜಪತಿವಿಯೋಗ ಶಟನೀಪತಿಯ ಸಂಗಮವಾದುದು, ಗುರುವಚನವಿದು ಸುಜನಜನಕಾಭರಣ— ಇಂತಹ ರೂಪಕೋಕ್ತಿಗಳು ಕುಮಾರ ವಾಲ್ಮೀಕಿಯ ಕೃತಿಯಲ್ಲಿ ಹೇರಳ ದೊರೆಯುತ್ತವೆ.

"ಪರಮ ತತ್ವದ ಬಿತ್ತಿನೊಳಗಂ ಕುರಗಳೈದಾದಂತೆ ತೋರುವ ತೇಜೋಮಯನು ಮೆರೆದನು ಪಂಚವಕ್ತ್ರದಲಿ," "ಕುಕ್ಷಿ ನೃಪಾಲನು ಭೂಮಿಯಲಿ ಜನಿಸಿದನು ನಿಗಮಸ್ತೋಮಕಾದಿ ಪ್ರಣವದೊಲು," "ಮುತ್ತಿತಾ ಬಲಜಲಧಿ ವಡಬನ ಮುತ್ತು ವಂಬಧಿಯಂತೆ," "ಕೂಡಿತಸುರ ಪದಾತಿಲಗ್ಗೆಯ ಮಾಡಿ, ಮುತ್ತಿದರಂಗಜನ ಮುಮ್ಮೊಡ ಮುರಿದುಪ್ಪರಿಸಿ ತರಣಿಯ ತುಡುಕುವಂದದಲಿ," "ವರ ಪಯೋನಿಧಿ ಮಧ್ಯದಿಂದವತರಿಸುವ ಅಮೃತಾಂಶುವಿನಂತೆ ಮೆರೆವ ಶ್ರೀರಾಮ"

—ಹೀಗೆ ಬರುವ ಹೋಲಿಕೆಗಳು ಸಹಜ ಸುಂದರವಾಗಿವೆ. ಹೀಗೆಯೇ ಅತಿಶಯೋಕ್ತಿ, ದೃಷ್ಟಾಂತ, ಅಸಂಭವ, ಸ್ವಭಾವೋಕ್ತಿ, ಸಂದೇಹ, ಭ್ರಾಂತಿಮಾನ್, ಸ್ಮೃತಿಮಾನ್, ಸಹೋಕ್ತಿ, ಮುಕ್ತ ಪದಗ್ರಹಣ, ಶ್ಲೇಷೆಗಳಂತಹ, ಅಲಂಕಾರಗಳೂ, ಪ್ರಾಸ, ಅನುಪ್ರಾಸ, ಪುನರುಕ್ತಿ, ಯಮಕಗಳಂತಹ ಶಬ್ದಾಲಂಕಾರಗಳೂ ತೊರವೆರಾಮಾಯಣದ ಕಾವ್ಯಶರೀರವನ್ನು ಸಿಂಗರಿಸುವಲ್ಲಿ ಸಫಲವಾಗಿವೆ.

ರಮಣ ರಿನ್ನಾಹಲೋ ಲಕ್ಷ್ಮೀ
ರಮಣ ನಲ್ಲದೆ ನೆರೆದ ಪೃಥ್ವೀ
ರಮಣರೀ ಕನ್ನಿಕೆಗೆ ಸದೃಶವೆ ಶಿವಮಹಾದೇವ

—ಶಬ್ದಾಲಂಕಾರಕ್ಕೆ ಇದೊಂದು ಉದಾಹರಣೆ ಸಾಕು.

## ರಸಪೋಷಣೆ

ತೊರವೆ ರಾಮಾಯಣದ ಕಥಾ ದೃಷ್ಟಿಯನ್ನು ಗಮನಿಸಿದರೆ ಜೀವವು ದೇವನಿಗೆ ಅರ್ಪಿತವಾಗುವ ಭಕ್ತಿಭಾವದ ಉತ್ಪತ್ತಿಯೇ ಕವಿಯ ಆಶಯವೆನ್ನುವುದು ಖಚಿತವಾಗುತ್ತದೆ. ಕಾವ್ಯವು ಸೃಷ್ಟಿಗೊಂಡ ಕಾಲ, ಪರಿಸರ, ಪ್ರೇರಣೆಗಳನ್ನು ಗಮನಿಸಿದರೂ ಭಕ್ತಿಯ ಪ್ರಧಾನೋದ್ದೇಶವು ಈ ಕೃತಿಯಲ್ಲಿ ನಿಚ್ಚಳವಾಗಿದೆ. ಆಲಂಕಾರಿಕರು ಭಕ್ತಿಗೆ (ಪರಮಾತ್ಮನ ಕುರಿತು ಪ್ರೀತಿ—ರತಿಯೇ ಸ್ಥಾಯಿಭಾವವಾಗಿ ಉಳ್ಳ ದೈವಿಕ ಶೃಂಗಾರ) ರಸದ ಸ್ಥಾನವನ್ನು ಕೊಡಲಿ, ಬಿಡಲಿ ಕುಮಾರ ವಾಲ್ಮೀಕಿಯಂತೂ ಭಕ್ತಕವಿ, ತೊರವೆ ರಾಮಾಯಣವು ಭಕ್ತದೃಷ್ಟಿಯ ಕಾವ್ಯ.

## ದೈವಿಕ–ಲೌಕಿಕ ಶೃಂಗಾರಗಳ ಮುಖಗಳು

ಲೌಕಿಕವಾದ ರತಿಯೇ ಸ್ಥಾಯಿಭಾವವಾಗಿ ಉಳ್ಳ ಶೃಂಗಾರಕ್ಕೂ ಅಲೌಕಿಕವಾದ ವಿರತಿಯೇ ಮುಖ್ಯ ಭಾವವಾಗಿ ಉಳ್ಳ 'ಭಕ್ತಿ–ಶೃಂಗಾರ'ಕ್ಕೂ ಅಂತರ ಕಲ್ಪಿಸಿಕೊಳ್ಳದೆ, ಕಾವ್ಯದ ಪ್ರಧಾನ ರಸವು ಶೃಂಗಾರ (ಶೃಂಗಾರದಲ್ಲಿಯೇ ಭಕ್ತಿಯೂ ಅಂತರ್ಗತಗೊಳ್ಳುತ್ತದೆ ಎಂಬ ನಿರ್ಧಾರದಿಂದ)ವೆಂದರೆ ಕುಮಾರ ವಾಲ್ಮೀಕಿಗೆ ಅಪಚಾರವೆಸಗಿದಂತಾದೀತು. ಭಕ್ತಿಮಾರ್ಗದಲ್ಲಿ ಭೋಗದ ವಿಜೃಂಭಣೆಯಿಲ್ಲ, ಪೌರುಷದ ಮೆರೆದಾಟವಿಲ್ಲ. ತರ್ಕದ ಎಳೆದಾಟವಿಲ್ಲ. ಅಲ್ಲಿರುವುದು ಅಪೌರುಷೇಯವಾದ, ತರ್ಕಾತೀತವಾದ ಪರಮಾತ್ಮ ತತ್ತ್ವದಲ್ಲಿ ಅಚಲವಾದ ಶ್ರದ್ಧೆ, ನಿಷ್ಕಲ್ಮಶವಾದ ಪ್ರೇಮ, ಸರ್ವಾರ್ಪಣ ದೃಷ್ಟಿ. ದೈವಿಕ ಶೃಂಗಾರ(ಭಕ್ತಿ)ದ ಭಾವ, ವಿಭಾವ, ಸಂಚಾರೀಭಾವ, ಅನುಭಾವ—ಎಲ್ಲವೂ ಲೌಕಿಕ ಶೃಂಗಾರಕ್ಕಿಂತ ಭಿನ್ನವಾದವುಗಳು.

ಇವೆರಡನ್ನೂ ಪ್ರತ್ಯೇಕವಾಗಿ ಗಮನಿಸುವುದು ಕವಿಯ ಆಶಯಕ್ಕೆ ಸಮುಚಿತವಾದದ್ದು.

ದೈವಿಕ-ಶೃಂಗಾರ (ಭಕ್ತಿ)

ಕಂಗಳನು ಹರಹಿದನು ರಾಮನ
ಮಂಗಳಶ್ರೀ ಮೂರ್ತಿಯಲಿ ನೆರೆ
ಹಂಗ ಕಳಿದನು ಭವಭವದ ದುಷ್ಕರ್ಮ ವಾಸನೆಯ
ಸಂಗಿಯಾದನು ಸುಖಮಯದ ಮೋ
ಕ್ಷಾಂಗನೆಯ ಘನಪೀನ ಜಘನ ಕು
ಚಂಗಳಿಗೆ ಕೈನಿಲುಕ ಲುದ್ಯೋಗಿಸಿದನವ ಬಳಿಕ

(ತೊ,ರಾ. III 8–64)

ಲೌಕಿಕ ಶೃಂಗಾರ (ಅನುರಕ್ತಿ)

ನಿರಿಯ ನೊಯ್ಯೊರಿಸುತ ಮೇಲುದ
ನಿರಕುತೆಡಗೈದುದಿಯಲಾ ಮುಂ
ಜೆರಗ ಸಂವರಿಸುತ್ತ ನಸುನಾಚಿಕೆಯುಭಾರದಲಿ
ತುರುಗೆವೆಯ ನಿಡುಗಂಗಳಿನ ಕಡೆ
ಸೆರಗ ನಮರಿಸು ತೊಯ್ಯ ನೊಯ್ಯನೆ
ಮುರುಕ ಮಿಗೆ ಕಾಣಿಸುತ ಬಂದಳು ರಾಮನಿದ್ದೆಡೆಗೆ

(ತೊ.ರಾ. III 4–8)

ಶೂರ್ಪನಖಿಯ ಈ ವಿಕೃತ ಶೃಂಗಾರವನ್ನು ಭರತ, ಅಹಲ್ಯೆ, ವಿಭೀಷಣ, ಅತಿಕಾಯ—ಮೊದಲಾದವರ ದೈವಿಕವಾದ 'ಭಕ್ತಿ' ಯೊಂದಿಗೆ ಸರಿದೂಗಿಸುವುದು ಸರಿಯಾಗದು.

## ಹಾಸ್ಯರಸ

ನರನಾಟಕದ ನಾರಾಯಣನ ಕಥೆಯಲ್ಲೂ ಕವಿಯು ನರ ಲೋಕದ ಹಾಸ್ಯವನ್ನು ಮಿನುಗಿಸಿದ್ದಾನೆ. ರಾಮಲಕ್ಷ್ಮಣರನ್ನು

ಕಾಮಿಸಿ, ಕೊನೆಗೆ ಮೂಗು ಕತ್ತರಿಸಿಕೊಂಡ ಶೂರ್ಪನಖಿಯನ್ನು ಕಂಡು, 'ಲೋಕದ ಸುಂದರಿಯರಿಗೆ ಈ ಸೊಬಗು ಸಂಭವಿಸಿದುದ ನಾ ಕಾಣೆ, ಶ್ರೀರಾಮನು ಆಕೆಯ ಕೈಹಿಡಿಯಬಹುದಾಗಿತ್ತು, ಇಲ್ಲವಾದರೆ ಲಕ್ಷ್ಮಣನಾದರೂ ವರಿಸಬಹುದಾಗಿತ್ತು, ಅದನ್ನುಳಿದು ರೂಪಿಗೆ ಸೋತು ಕಾಮಿಸಿ ಬಂದವಳನ್ನು ಹೀಗೆ ಗುಮ್ಮನನ್ನಾಗಿ ಮಾಡುವುದು ಸರಿಯೇ ?"—ಎಂದು ನಗುತ್ತಾಳೆ ಸೀತೆ.

"ನಮ್ಮ ಬನವನ್ನು ಏಕೆ ಮುರಿದೆ?" ಎಂದು ಪ್ರಹಸ್ತನು ಕೇಳಿದ ಪ್ರಶ್ನೆಗೆ ಹನುಮಂತನು 'ನಾವಿದನರಿಯೆವು, ಈ ಹುಲು ಬಾಲವೆಸಗಿದ ಕೆಲಸವಿದೈಸೆ" ಎಂದುತ್ತರಿಸಿದಲ್ಲಿ ಮುಖ್ಯಪ್ರಾಣನ ನಿರ್ಭೀತಿ, ಹಾಸ್ಯದೃಷ್ಟಿಗಳು ವ್ಯಕ್ತವಾಗುತ್ತವೆ.

ಲಂಕಾನಗರದಲ್ಲಿ ದೊರೆಯುವ ಬಟ್ಟೆಬರೆಗಳನ್ನು ಸುತ್ತಿ ಅಲಂಕೃತವಾದ ತನ್ನ ಬಾಲವನ್ನು ಕಂಡು ಮಾರುತಿಗೆ ನಗು ಉಕ್ಕುತ್ತದೆ. ತನ್ನ ಪಾಲಿಗೆ ಬ್ರಹ್ಮನು ದಯಪಾಲಿಸಿದ ಕೌಪೀನವೊಂದೇ ಗತಿ—ಆದರೆ ತನ್ನ ಬಾಲವು ಯಾವುದೋ ಪೂರ್ವ ಜನ್ಮದ ಪುಣ್ಯ ವಿಶೇಷದಿಂದ ಇಂತಹ ಅಲಂಕಾರ ಭಾಗ್ಯವನ್ನು ಪಡೆದಿರಬೇಕು ಎನ್ನುತ್ತಾ, "ಇನ್ನು ಆದಟುತನ ಸಾಕು, ಲಂಕೆಯ ನಾರಿಯರ ಸೀರೆಗಳನ್ನು ತಂದು ಬಾಲಕ್ಕೆ ಸುತ್ತುವ ಅನಾಹುತಕ್ಕೆ ಅವಕಾಶ ನೀಡಬೇಕೆ"—ಎಂದು ತನ್ನ ಬಾಲವನ್ನು ತಾನು ಎಚ್ಚರಿಸುವುದು ಸ್ವಾರಸ್ಯಕರವಾಗಿದೆ.

ಅಂಗದನು ಸಂಧಾನಕ್ಕೆ ದಶಕಂಠನ ಆಸ್ಥಾನಕ್ಕೆ ಬಂದ ಪ್ರಸಂಗವನ್ನು ನೆನಪಿಸಬಹುದು. ಅಲ್ಲಿ ಪ್ರಹಸ್ತನು ಅಂಗದನೊಡನೆ "ಹಿಂದೊಮ್ಮೆ ಇಲ್ಲಿಗೆ ಬಂದು ಬಾಲ ಸುಡಿಸಿಕೊಂಡು ಹಿಂತೆರಳಿದ್ದ ಕಪಿಯ ವಿಚಾರವೇನಾದರೂ ನಿನಗೆ ತಿಳಿದಿದೆಯೇ ?"

—ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಉತ್ತರವಾಗಿ ಅಂಗದನು ಆಡಿದ ನುಡಿಯಲ್ಲಿ ದಿಟ್ಟತನದ ಚುಚ್ಚು-ಹಾಸ್ಯವಿದೆ :

ಹೇಳಲೇನದನವನ ವಿಧಿಯನು
ಕೇಳಿತಿಲ್ಲವಲಾ ಕಪೀಂದ್ರನ
ಪಾಳಿಯುವ ಪೊಗಗೊಡದೆ ಕಪಿಪೋತಂಗಳುಬ್ಬಿರಿದು
ಬಾಲ ಸುಡುಕನ ತೆವರಲಾ ಕಪಿ
ಯೂಳಿಗವು ಎನಗಾಯ್ತು ನಮ್ಮಾ
ಬಾಲವನು ನೀವ್ ಕೆಣಕಿ ನೋಡಿದಡರಿಯ ಬಹುದೆಂದ

(ತೊ.ರಾ. VI 10–39)

ಮುಂದೆ, ಹನುಮಂತನು ತಾನುತಂದ ಮಹೌಷಧಿಯಲ್ಲಿ ಬಾಲವನ್ನು ಅದ್ದಿ ರಣರಂಗದಲ್ಲಿ ಬಿದ್ದ ಕಪಿವೀರರ ಮೇಲೆ ಚೆಲ್ಲಿದ ದೃಶ್ಯವನ್ನು ಊಹಿಸಿಕೊಂಡರೆ ಓದುಗನಲ್ಲಿ ನಗು ಚಿಮ್ಮದೆ ಇರುವುದಿಲ್ಲ.

ಸುಗ್ರೀವನು ಕುಂಭಕರ್ಣನ ಕಂಕುಳಿನಿಂದ ತಪ್ಪಿಸಿಕೊಂಡ ರೀತಿಯೂ, ಹಾಗೆ ಜಾರಿ ನುಣುಚಿ ತಪ್ಪಿಸಿಕೊಳ್ಳುತ್ತ ಸುಗ್ರೀವನು ಆ ರಕ್ಕಸನ ಮೂಗನ್ನು ಕಿತ್ತು ಹರಿದುಕೊಂಡು ತಂದುದೂ, ಕುಂಭಕರ್ಣನು ಆಸ್ಥಾನಕ್ಕೆ ಹೋಗಿ ‘ಕಪಿರಾಜನನ್ನು ಕಂಕುಳಲ್ಲಿ ಬಿಗಿದು ತಂದಿರುವೆ — ನೋಡು’ ಎಂದು ಕಂಕುಳೆತ್ತಿ ನಗೆಗೀಡಾಗುವುದೂ—ತೊರವೆ ರಾಮಾಯಣದಲ್ಲಿನ ಹಾಸ್ಯಪ್ರಕರಣಗಳಲ್ಲೊಂದು.

ಮೂಗು ಕಳೆದುಕೊಂಡ ಕುಂಭಕರ್ಣನನ್ನು ಕಂಡು ಜನರು—

“ಮುಗಿದುದಿಂತಿವರಿಬ್ಬರಿಗೆ ಸಂ
ಯುಗ ದೊಳಿನ್ನವರಣ್ಣಗೇನನು
ಬಗೆವರೋ ಬಲಿಮುಖರು!—ಎಂದಾಡಿಕೊಳ್ಳುತ್ತಾರೆ

(ತೊ.ರಾ. VI 28–6)

ತಂಗಿ ಶೂರ್ಪನಖಿ, ಅಣ್ಣ ಕುಂಭಕರ್ಣ—ಇಬ್ಬರೂ ಮೂಗು ಕಳೆದುಕೊಂಡಂತಾಯಿತು. ಇನ್ನುಳಿದ ಹಿರಿಯಣ್ಣ ರಾವಣನ ಮೂಗಿನ ಕಥೆಯೇನಾಗುತ್ತದೋ ?—ಎಂದು ಲಂಕೆಯ ಪೌರರು ಚಿಂತಿಸುತ್ತಾರೆ. ಇದೇ ಸಂದರ್ಭದಲ್ಲಿ ಶ್ರೀರಾಮನು ವಿಭೀಷಣ ನೊಡನೆ "ನಿನ್ನಣ್ಣನ ಸೇನೆಯಲ್ಲಿ ಹೀಗೆ ಮೂಗು ಕಳೆದು ಕೊಂಡವರ ಲೆಕ್ಕವೆಷ್ಟು ?"—ಎಂದು ನಗುತ್ತಾ ವಿಚಾರಿಸು ತ್ತಾನೆ.

ರಾವಣನ ಹತ್ತು ಮುಖಗಳಿಗೂ ತನ್ನ ಬಾಲದ ಬೆಂಕಿ ಹೊತ್ತಿಸಿ ಅವನ ಸಾಲುಗಡ್ಡಗಳನ್ನು ಸುಟ್ಟ ಹನುಮಂತನ ಪ್ರತಾಪ, ರಣರಂಗದಲ್ಲಿ ರಾವಣನು ಮೈಯ ಬಟ್ಟೆಗಳನ್ನೆಲ್ಲಾ ಕಳೆದುಕೊಂಡು ಜಿನಮುನಿಯಂತೆ ಬತ್ತಲೆಯಾದನೆಂಬ ವರ್ಣನೆ, ಆತನ ಬತ್ತಲೆ ಮೈಯನ್ನು ಸುರನಾರಿಯರು ಕಂಡು ನಾಚಿದ ರೆನ್ನುವ ಹೇಳಿಕೆ, ನೀಲನು ದಶಕಂಠನನ್ನು ತನ್ನ ಬಾಲದ ತುದಿಗೆ ಕಟ್ಟಿ ತೂಗಿ ಜೋಗುಳ ಹಾಡುವುದು—ಎಲ್ಲವೂ ಹಾಸ್ಯರಸ ಪೋಷಕ ಪ್ರಸಂಗಗಳು. ಕೆಲವೊಮ್ಮೆ ಕವಿಯು ನಗಿಸಹೊರಟು ಗಂಭೀರತೆ ಮತ್ತು ಔಚಿತ್ಯಗಳ ಗೆರೆ ಮೀರಿದನೇ—ಎಂಬ ಸಂದೇಹ ಮೂಡುವುದೂ ಉಂಟು.

## ಕರುಣರಸ

ಶೋಕವೇ ಸ್ಥಾಯಿಯಾಗಿ ಉಳ್ಳ ಕರುಣರಸಪೋಷಕ ಸನ್ನಿ ವೇಶಗಳು—ಪುತ್ರಹೀನನಾದ ದಶರಥನ ವ್ಯಥೆ, ವನವಾಸಕ್ಕೆ ರಾಮನು ಹೊರಟಾಗ ಕೌಸಲ್ಯೆ, ದಶರಥ ಮೊದಲಾದವರ ದುಃಖ, ತಾಂಡಸ ಮರಣವಾರ್ತೆ ತಿಳಿದು ಅವನ ಮಾತಾಪಿತರ ಶೋಕ, ವಾಲಿವಧೆಯನ್ನರಿತ ತಾರಾವಿಲಾಪ, ಶ್ರೀರಾಮನ ಕ್ರೋಧವನ್ನು

ಮನಗಂಡು ಸಮುದ್ರರಾಜನ ಪತ್ನಿಯರಾದ ನದೀ ಮಾನಿನಿಯರ ದೈನ್ಯ, ಕುಂಭಕರ್ಣ, ಅತಿಕಾಯ, ಇಂದ್ರಜಿತು, ರಾವಣರ ಮರಣಕಾಲದಲ್ಲಿ ಮಂಡೋದರಿ ಮತ್ತು ಇತರ ರಾಕ್ಷಸ ಸ್ತ್ರೀಯರ ಪ್ರಲಾಪ, ಅಣ್ಣನು ರಣರಂಗದಲ್ಲಿ ಮಡಿದು ಬಿದ್ದುದನ್ನು ಕಂಡ ವಿಭೀಷಣನ ದುಃಖ....ಇತ್ಯಾದಿ.

## ರೌದ್ರರಸ

ರೌದ್ರಕ್ಕೆ ಕ್ರೋಧವೇ ಸ್ಥಾಯಿ. ದೇವತೆಗಳ ಕುರಿತು ರಾವಣನ ಕ್ರೋಧ, ತಾಟಕಿಯ ರೌದ್ರಾವೇಶ, ರಾಮನ ಪಟ್ಟಾಭಿಷೇಕಕ್ಕೊದಗಿದ ವಿಘ್ನವನ್ನರಿತ ಲಕ್ಷ್ಮಣನ ಕ್ರೋಧ, ಖರದೂಷಣ ತ್ರಿಶಿರ ಸಂತಾಪ, ಸಮುದ್ರರಾಜನು ತನ್ನನ್ನು ಗಮನಿಸದಿದ್ದಾಗ ಶ್ರೀರಾಮನಲ್ಲುಂಟಾದ ಕೋಪಶಿಖಿ, ರಾಕ್ಷಸ ಬಲದ ರೌದ್ರಾವೇಶ—ಪ್ರಕರಣಗಳಲ್ಲಿ ರೌದ್ರರಸ ಪೋಷಣೆ ಸಹಜವಾಗಿ ನಡೆದಿದೆ.

## ವೀರರಸ

ರಾಮಾಯಣದ ಮುಖ್ಯ ವಸ್ತುವಾದ ರಾವಣವಧೆಗೆ ಶ್ರೀರಾಮ ಲಕ್ಷ್ಮಣ ಮತ್ತು ವಾನರ ವೀರರ ಉತ್ಸಾಹವೇ ಸ್ಥಾಯಿಭಾವ. ಸಾಹಸಾತಿಶಯದ ವಿವಿಧ ವರ್ಣನೆಗಳಿಂದ ವೀರರಸದ ಅಭಿವ್ಯಕ್ತಿ. ಶ್ರೀರಾಮನ ಕಥೆಯಲ್ಲಿ ರಾಮನ ವೀರಶ್ರೀಯ ವರ್ಣನೆಗೆ ಪ್ರಾಧಾನ್ಯವಿದ್ದರೂ ಉಳಿದ ವೀರಾಧಿವೀರರ ಪರಾಕ್ರಮಾತಿಶಯ ಉಲ್ಲೇಖನೀಯವಾದದ್ದೇ. ರಾಮನಿಂದ ವಿಶ್ವಾಮಿತ್ರ ಯಜ್ಞ ರಕ್ಷಣೆ, ಸೀತಾ–ಕಲ್ಯಾಣ ಮಂಟಪದಲ್ಲಿ ರಾಮನಿಂದ ಶಿವ ಧನುರ್ಭಂಗ, ಪರಶುರಾಮನ ಗರ್ವಭಂಗ, ಹನುಮಂತನ

ಸಮುದ್ರೋಲ್ಲಂಘನ, ಲಂಕಾದಹನ, ಸೇತುಬಂಧನ, ಅಸಂಖ್ಯ ದಾನವವೀರರು ಹನನಗೊಂಡ ಸಂಗ್ರಾಮದ ವರ್ಣನೆ—ಎಲ್ಲೆಲ್ಲೂ ವೀರರ ಚಿತ್ರಣವಿದೆ.

## ಭಯಾನಕ ರಸ

ದಾನವ ಭಯ ನಿವಾರಣೆಯೇ ಶ್ರೀರಾಮಾವತಾರದ ದಿವ್ಯೋದ್ದೇಶ. ರಾವಣ ಮತ್ತು ಅವನ ರಾಕ್ಷಸ ಪರಿವಾರದವರಿಂದಾಗಿ ಸಜ್ಜನರಿಗೂ, ಸತ್ಕರ್ಮಗಳಿಗೂ ಭಯಾವಹ ಪರಿಸ್ಥಿತಿಯಿದ್ದುದರ ವರ್ಣನೆ ಕಾವ್ಯದಲ್ಲಿದೆ.

ಭೀಕರ ಮಳೆಗಾಲದ ವರ್ಣನೆ, ಪರಶುರಾಮನನ್ನು ಕಂಡು ದಶರಥನ ಪರಿವಾರವು ತಾನೊಳಗಾದ ಭಯ, ಲಂಕಾದಹನದ ಭಯಾನಕ ಚಿತ್ರಣ, ಕುಂಭಕರ್ಣ—ಇಂದ್ರಜಿತು—ರಾವಣರ ಬಲಾತಿಶಯವು ಕಪಿಸೇನೆಯಲ್ಲಿ ಉಂಟುಮಾಡಿದ ಕಂಗಾಲು ಪರಿಸ್ಥಿತಿಗಳನ್ನು ಇಲ್ಲಿ ಉದಾಹರಿಸಬಹುದು. ಶ್ರೀರಾಮ ರಾವಣರ ಸಂಗ್ರಾಮವಂತೂ ಘೋರ-ಭಯಂಕರವಾದುದು.

## ಬೀಭತ್ಸರಸ

ಜುಗುಪ್ಸೆಯನ್ನು ಕೆರಳಿಸುವ ಹೆಣಗಳಿಂದಲೂ, ರಕ್ತದ ಮಡುಗಳಿಂದಲೂ ತುಂಬಿದ ರಣರಂಗ ವರ್ಣನೆಯು ಬೀಭತ್ಸರಸ ಪೋಷಕವಾಗಿದೆ.

## ಅದ್ಭುತರಸ

ಕುಮಾರ ವಾಲ್ಮೀಕಿಯ ದೃಷ್ಟಿಯಲ್ಲಿ ಅದ್ವಿತೀಯವಾದ ಶ್ರೀರಾಮನ ಪ್ರತಾಪಾತಿಶಯಕ್ಕಿಂತ ಅದ್ಭುತವಾದುದು

ಇನ್ನೊಂದಿಲ್ಲ. ಪರಮಾತ್ಮನ ಮಹಾತ್ಮ್ಯಜ್ಞಾನಪೂರ್ವಕವಾದ ಭಕ್ತಿ ಹೊರಹೊಮ್ಮುವುದಕ್ಕೆ ದೇವೇಶನ ಅಗಾಧ ಲೀಲಾ ವೈಭವವನ್ನು ಕಂಡು ಉಂಟಾಗುವ ಅವರ್ಣನೀಯವಾದ ವಿಸ್ಮಯವೂ ಪ್ರಮುಖ ಪ್ರೇರಕ. ವೈಕುಂಠ ವರ್ಣನೆ, ಪರಮಾತ್ಮನ ಅಸಾಧಾರಣತೆಯ ಕುರಿತಾದ ಸ್ತುತಿ, ಹನುಮಂತನ ತ್ರಿವಿಕ್ರಮರೂಪ, ರಾಮನು ರಾವಣನಿಗೆ ತೋರಿದ ವಿಶ್ವರೂಪ ಸೇತುಬಂಧನ ಕಾಲದಲ್ಲಿ ಜಾಂಬವ, ಹನುಮ, ಅಂಗದ, ನಳ— ಮೊದಲಾದ ವಾನರವೀರರು ಮೆರೆದ ಅದ್ಭುತ ಸಾಹಸ— ಇವೆಲ್ಲವೂ ಅದ್ಭುತಜನಕಗಳಾಗಿವೆ.

**ಶಾಂತರಸ**

ಕೈಲಾಸದಲ್ಲಿ ಶಿವಸಾನ್ನಿಧ್ಯ, ವಿಭಾಂಡಕ ಕುಮಾರನ ಆಶ್ರಮ, ಶಬರಿಯ ಆಶ್ರಮದ ದ್ವೇಷರಹಿತ ಪರಿಸರ—ಇವುಗಳ ವರ್ಣನೆಯಲ್ಲಿ ಶಾಂತರಸದ ಪೋಷಣೆಯಾಗಿದೆ.

ಕಳವು, ಅನೃತ, ಅನ್ಯಾಯ, ಕೊಲೆ, ದಳವುಳವು, ದುರ್ಭಯ, ಬಾಧೆ, ವಂಚನೆ, ಹಳಿವು, ಹಾದರ, ಬಂದಿ, ಸಂಕರ ಜಾತ್ಯ ಧರ್ಮಗಳು—ಸುಳಿಯದ ರಾಮರಾಜ್ಯ ಶಾಂತಿಯ ಆವಾಸಸ್ಥಾನವಾಗಿದ್ದಂತೆ ಕವಿ ವರ್ಣಿಸಿದ್ದಾನೆ.

ಹೀಗೆ, ತೊರವೆ ರಾಮಾಯಣದ ಪ್ರಧಾನರಸವು ಭಕ್ತಿ (ದೈವಿಕ–ಶೃಂಗಾರಾನುರಾಗ)ಯಾದರೂ, ಕವಿಯು ಇತರ ರಸಗಳ ಪೋಷಣೆಗೂ ಗಮನ ಕೊಟ್ಟಿದ್ದಾನೆನ್ನುವುದು ಗಮನಾರ್ಹವಾಗಿದೆ.

**ಕಾವ್ಯಕಲ್ಪನೆ**

ಕಾವ್ಯವು ರಸಮಯವಾಗಿರಬೇಕು, ರಸವು ಅಮೃತ ಸ್ವರೂಪಿ

ಎನ್ನುವ ತನ್ನ ಅನಿಸಿಕೆಯನ್ನು 'ಅಮೃತ ರಸಮಯ ವಿವಿಧ ಕಾವ್ಯ' ಎಂದು ಉಲ್ಲೇಖಿಸಿದ್ದಾನೆ ಕವಿ. ಪ್ರತಿಭೆ, ವ್ಯುತ್ಪತ್ತಿ, ಅಭ್ಯಾಸಗಳಿಲ್ಲದ ಕವಿಯ ಕಾವ್ಯವು 'ಅಳಿಗಬ್ಬಿಗನ ಹೆಕ್ಕಳದ ಕೃತಿ'ಯಾಗುತ್ತದೆ. ಈ ವಿಚಾರವನ್ನು ಕುಮಾರ ವಾಲ್ಮೀಕಿಯು 'ಸೀತಾ ಶೂನ್ಯವಾದ ದಳನಿಳಯವು ಅಳಿಗಬ್ಬದಂತೆ ನೀರಸವಾಗಿ ತೋರಿತು' ಎಂದು ಹೋಲಿಸುವಲ್ಲಿ ಧ್ವನಿಸಿರುತ್ತಾನೆ.

ಕವಿಗೆ ಶಬ್ದಸಂಪತ್ತು ಅನಿವಾರ್ಯವಾದ ಐಶ್ವರ್ಯ. ಆ ಸಂಪತ್ತಿನ ಕೊರತೆಯುಳ್ಳವನು 'ಶಬ್ದಾಕ್ಷರ ದರಿದ್ರ'ನಾಗುತ್ತಾನೆ. ಅಂತಹವರ ಕಾವ್ಯವು 'ಬಂಧುರ ರಸ ವಿವರ್ಜಿತವಾಗುತ್ತದೆ' ಅಂತಹ ಕುಕವಿಗಳ ಹಂಗು ತನಗಿಲ್ಲ ಎಂದು ಕುಮಾರ ವಾಲ್ಮೀಕಿ ಹೇಳಿಕೊಳ್ಳುತ್ತಾನೆ. ಶಬ್ದಜ್ಞಾನವೊಂದೇ ಮಹಾ ಕವಿಯ ಬಂಡವಾಳವಲ್ಲ. ಶಬ್ದದಲ್ಲಿ 'ಧ್ವನಿ'ಯನ್ನು ತುಂಬುವುದೇ ಕವಿಯ ಕಾಯಕ. ಶಬ್ದದ ವ್ಯಂಜನಾ ವೃತ್ತಿಯಿಂದಾಗಿ ಕಾವ್ಯವು ರಸಪ್ರತೀತಿಗೆ ನೆರವಾಗುತ್ತದೆ. ಕಾವ್ಯದ ಗೂಢಾರ್ಥವು ಎಂದೂ ವಾಚ್ಯವಲ್ಲ, ಸೂಚ್ಯ. ಅದು ಮೇಲಿಂದ ಮೇಲೆ ಅಸ್ಪಷ್ಟವೆನಿಸಿದರೂ, ಅದರ ಹೃದಯಶ್ರೀ ವಿಪುಲಾರ್ಥದಾಯಕವಾದದ್ದು. ಹೀಗೆ, ಕಾವ್ಯಮೀಮಾಂಸೆಗೆ ಸಂಬಂಧಿಸಿದ—ಕುಮಾರ ವಾಲ್ಮೀಕಿಯ 'ಕಾವ್ಯಕಲ್ಪನೆ'ಯನ್ನು ಶೃತಗೊಳಿಸುವ ಹೇಳಿಕೆಗಳು ತೊರವೆ ರಾಮಾಯಣದಲ್ಲಿ ಅಲ್ಲಲ್ಲಿ ದೊರೆಯುತ್ತವೆ.

ಅಶೋಕವನದಲ್ಲಿ ಸೀತಾಮಾತೆಯು ಹನುಮಂತನಿಗೆ 'ಗೂಢದರ್ಥವ ತೆಗೆಯಬಾರದ ಕಾವ್ಯದಂತೆ' ಕಾಣಿಸುತ್ತಾಳೆ—ಎಂಬಲ್ಲಿಯೂ ಕವಿಯ ಕಾವ್ಯದೃಷ್ಟಿಯ ಹೊಳಹು ಮಿಂಚುತ್ತದೆ.

ಕುಮಾರ ವಾಲ್ಮೀಕಿಯು ಕುಮಾರವ್ಯಾಸನನ್ನೇ ಅನುಸರಿಸಿ ತನ್ನ ಕಾವ್ಯವು—

ಸುಕವಿಗಳ ಸುಮ್ಮಾನ, ಸೂರಿ
ಪ್ರಕರದಮಲಜ್ಞಾನ, ಮುನಿಕರ
ಮುಕುರ, ಗುಣಿಗಳ ಗೂಢ ನಿಧಿ, ಸುರಸರ ಸುಧಾಶರಧಿ
ಅಕುಟಿಲರ ಮನಮೆಚ್ಚು ನರಹರಿ
ಭಕುತರುಮ್ಮಹದಚ್ಚು ಶಿವ ಸೇ
ವಕರ ಮೆಚ್ಚು ಕುಮಾರ ವಾಲ್ಮೀಕಿ ಪ್ರಬಂಧ ಕೃತಿ
(ತೊ.ರಾ. I 1–11)

ಎಂದು ಹೆಗ್ಗಳಿಕೆಯನ್ನು ಮೆರೆದಿದ್ದರೂ, ಕಾವ್ಯವು ಸಾರ್ಥಕವಾಗಬೇಕಾದರೆ ಸಹೃದಯರು ಅಕುಟಿಲರೂ, ಸುರಸರೂ, ವಿವೇಕಾಶ್ರಯರೂ, ಜಾಣರೂ, ಅನಸೂಯರೂ ಆಗಿರಬೇಕು ಎನ್ನುವುದನ್ನು ಹೇಳಲು ಮರೆಯುವುದಿಲ್ಲ. ತನ್ನ ಕಾವ್ಯವು ಸುಸಂಸ್ಕೃತರಾದ ಶ್ರೋತೃಗಳ ಅಘರಾಶಿಯನ್ನು ನಾಶಮಾಡುವುದೆಂದೂ, ಇಹದಲ್ಲಿ ಮುದನೀಡುವುದೆಂದೂ, ಪರದಲ್ಲಿ ಪರಮಪದವನ್ನೀಯುವುದೆಂದೂ—ದೃಢವಾಗಿ ನಂಬಿದ ಕುಮಾರ ವಾಲ್ಮೀಕಿಯು ತನ್ನ ಶ್ರೀರಾಮನ ದಿವ್ಯಕಥೆಯ ಕಾವ್ಯೋದ್ಯಮದಲ್ಲಿ ಇಹಪರಗಳೆರಡರ ಕಲ್ಯಾಣವನ್ನು ಕಂಡವನು.

## ಕುಮಾರವ್ಯಾಸ–ಕುಮಾರ ವಾಲ್ಮೀಕಿ

ಕುಮಾರ ವಾಲ್ಮೀಕಿಯ ಕಾವ್ಯಚಂದ್ರಮನಿಗೆ ಕುಮಾರ ವ್ಯಾಸನ ಭಾರತವು ಸೂರ್ಯನಿದ್ದ ಹಾಗೆ. ತಾನಿರಿಸಿಕೊಂಡ ಕಾವ್ಯನಾಮ, ಕಾವ್ಯಾಧಿಪತಿತ್ವ, ಛಂದಸ್ಸು, ಶಬ್ದ ಸಂಯೋಜನೆ, ವರ್ಣನಾವಿಲಾಸ—ಎಲ್ಲ ಅಂಶಗಳಲ್ಲೂ ಕುಮಾರ ವಾಲ್ಮೀಕಿಯು ಕುಮಾರವ್ಯಾಸನ ಬೆಳಕು ಪಡೆದದ್ದು ಸೂರ್ಯಪ್ರಕಾಶದಷ್ಟು ಸತ್ಯ. ಕಾವ್ಯದ ಪ್ರಾರಂಭದಿಂದಲೇ ತೊಡಗುವ ಈ ಅನುಸರಣೆ ತೊರವೆ ರಾಮಾಯಣದ 220 ಷಟ್ಪದಿಗಳಲ್ಲಿ ಅಕ್ಷರಶಃ ಎನಿಸುವಷ್ಟು ನಿಚ್ಚಳವಾಗಿದೆ.

## ಕೇವಲ ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ಕೊಡಲಾಗಿದೆ

### ಕುಮಾರವ್ಯಾಸನ—ಕರ್ಣಾವಸಾನ ಪ್ರಸಂಗ

ಕಳಚಿ ದುರಿಯೋಧನನ ಬೆಳುಗೊಡೆ
ನೆಲಕೆ ಬೀಳ್ವಂದದಲಿ ಕೌರವ
ಕುಲದ ನಿಖಿಳೈಶ್ವರ್ಯವಿಳೆಗೊರ್ಗುಡಿಸಿ ಕೆಡೆವಂತೆ
ಥಳಥಳಿಪ ನಗೆಮೊಗದ ಗಂಟಕಿ
ಬಲಿದ ಹುಬ್ಬಿನ ಬಿಟ್ಟ ಕಂಗಳ
ಪೊಳೆವ ಹಲುಗಳ ಕರ್ಣಶಿರ ಕೆಡೆದುದು ಧರಿತ್ರಿಯುಲಿ
(ಕು.ವ್ಯಾ.ಭಾ, ಕರ್ಣಪರ್ವ 27–24)

ದ್ಯುಮಣಿ ಕರ್ಣದ್ಯುಮಣಿ ಸಹಿತ
ಸ್ತಮಿಸೆ ಕಮಲಿನಿ ಕೌರವನ ಮುಖ
ಕಮಲ ಬಾಡಿತು ತಿಮಿರ ಹೆಚ್ಚಿತು ಶೋಕ ತಮದೊಡನೆ
(ಕು.ವ್ಯಾ.ಭಾ. VIII 27–31)

### ತೊರವೆ ರಾಮಾಯಣದ ಇಂದ್ರಜಿತು ಅವಸಾನ ಪ್ರಸಂಗ

ಹೇಳಲಚ್ಚರಿ ವೀರಲಂಕಾ
ಪಾಲಕನ ಭುಜವಿಜಯ ಲಕ್ಷ್ಮಿಯ
ತೋಳ ಕನ್ನಡಿ ಕಳಚಿ ಬೀಳ್ವಂದವಲಿ ನಭದಿಂದ
ಚಾಳಿಸುವ ದಾಡೆಗಳ ಹೊಗರೊಗು
ವಾನಿಗಳ ನಗೆ ಮೊಗದ ಕರ್ಣವಿ
ಲೋಲ ಕುಂಡಲದ ಸುರಶಿರ ಕೆಡೆದುದು ಧರಿತ್ರಿಯುಲಿ
(ತೊ.ರಾ. IV 44–57)

ದ್ಯುಮಣಿ ಕುಲಪಾರ್ಥಿವ ಸರೋಜ
ದ್ಯುಮಣಿ ದಶರಥ ರಾಯನಾ ಪ
ಶ್ಚಿಮದ ತರಣಿಯುತೇಜದಲಿ ತಿರುಗಿದನು ಪಟ್ಟಣಕೆ
(ತೊ.ರಾ. II 4–7)

ಕನ್ನಡ ಭಾರತದಲ್ಲಿ ಯುಧಿಷ್ಠಿರ ನಡೆಸಿದ 'ರಾಜಸೂಯ'ವು ಕುಮಾರ ವಾಲ್ಮೀಕಿಗೆ ದಶರಥನು ನಡೆಸಿದ ಪುತ್ರಕಾಮೇಷ್ಟಿಗೆ ಆದರ್ಶವಾಗಿದೆ. ದ್ರೌಪದೀಸ್ವಯಂವರ ವರ್ಣನೆಯಿಂದ ಸೀತಾ ಸ್ವಯಂವರ ಪ್ರಭಾವಿತವಾಗಿದೆ. ಈ ಮೊದಲೇ ಉದಾಹರಿಸಿದಂತೆ ಕರ್ಣಾವಸಾನ ಪ್ರಕರಣವು ತೊರವೆ ರಾಮಾಯಣದ ಅತಿಕಾಯ, ಇಂದ್ರಜಿತು, ರಾವಣ—ಈ ಮೂವರ ಅವಸಾನ ಕಾಲದ ವರ್ಣನೆಯಲ್ಲೂ ಪ್ರಭಾವ ಬೀರಿದೆ. ಕುಮಾರ ವಾಲ್ಮೀಕಿಯು ವರ್ಣಿಸಿದ ಮಹೋದರನ ಸುದರ್ಶನಗಜವು ಕುಮಾರವ್ಯಾಸನ 'ಸುಪ್ರತೀಕ'ದಿಂದಲೇ ಪ್ರೇರಿತವಾದದ್ದು. ತೊರವೆ ರಾಮಾಯಣದ ಸೂರ್ಯೋದಯ, ಸೂರ್ಯಾಸ್ತಗಳೂ ಗದುಗಿನ ಭಾರತವನ್ನೇ ನೆನಪಿಗೆ ತರುತ್ತವೆ.

## ಆ ಮುಂದಿನ ಕಾವ್ಯಗಳ ಮೇಲೆ ಕುಮಾರ ವಾಲ್ಮೀಕಿಯ ಪ್ರಭಾವ

ವಿದ್ಯಾಶಂಕರನ ಶಿಷ್ಯನಾದ ನರಹರಿ (ಇವನು ಕುಮಾರ ವಾಲ್ಮೀಕಿಯಲ್ಲ—ಎನ್ನುವುದು ನಮ್ಮ ಎಣಿಕೆ) ಕವಿಯ 'ಮೈರಾವಣ ಕಾಳಗ'ದಲ್ಲಿ ಕುಮಾರ ವಾಲ್ಮೀಕಿಯ ರಾಮಾಯಣದ ಪ್ರಭಾವವು ಸ್ಪಷ್ಟವಾಗಿದೆ. ಹಾಗೆಯೇ ಬತ್ತಲೇಶ್ವರ ಕವಿಯ 'ಕೌಶಿಕ ರಾಮಾಯಣ'ದಲ್ಲೂ ಸುಬ್ರಹ್ಮಣ್ಯ ಕವಿಯ 'ಹನುಮದ್ರಾಮಾಯಣ'ದಲ್ಲೂ ಅಜ್ಞಾತ ಕವಿಯೊಬ್ಬನ ('ವೆಂಕಟಾಚಲವಾಸ'ನ ಕಿಂಕರ) 'ಕಪೋತ ಚರಿತೆ'ಯಲ್ಲೂ ಕುಮಾರ ವಾಲ್ಮೀಕಿಯ ತೊರವೆ ರಾಮಾಯಣದ ಕಾವ್ಯರೀತಿಯ ಅನುಕರಣೆ-ಪ್ರಭಾವಗಳು ಗೋಚರವಾಗುತ್ತವೆ.

ರಾಮ ಕಥೆಯನ್ನು ಹೇಳುವ 14 ಯಕ್ಷಗಾನ ಪ್ರಸಂಗಗಳು ತೊರವೆ ರಾಮಾಯಣಕ್ಕೆ ಋಣಿಗಳಾಗಿವೆ :

(೧) ಪುತ್ರಕಾಮೇಷ್ಟಿ ಮತ್ತು ಸೀತಾ ಕಲ್ಯಾಣ
(೨) ಪಾದುಕಾ ಪಟ್ಟಾಭಿಷೇಕ
(೩) ಪಂಚವಟಿ–ಖರದೂಷಣ ಕಾಳಗ
(೪) ವಾಲಿ–ಸುಗ್ರೀವರ ಕಾಳಗ
(೫) ಚೂಡಾಮಣಿ–ಲಂಕಾದಹನ
(೬) ಸೇತುಬಂಧನ
(೭) ಅಂಗದ ಸಂಧಾನ
(೮) ನಾಗಾಸ್ತ್ರ ಕುಂಭಕರ್ಣ ಕಾಳಗ
(೯) ಕುಂಭಕರ್ಣ ಕಾಳಗ
(೧೦) ಅತಿಕಾಯ ಕಾಳಗ
(೧೧) ಇಂದ್ರಜಿತು ಕಾಳಗ
(೧೨) ಕಾಲನೇಮಿ ಕಾಳಗ
(೧೩) ರಾವಣವಧೆ
(೧೪) ಶ್ರೀರಾಮ ಪಟ್ಟಾಭಿಷೇಕ

ಕಳೆದ ಒಂದೆರಡು ಶತಮಾನಗಳಲ್ಲಿ ವಿವಿಧ ಕವಿಗಳಿಂದ ರಚಿತವಾದ ಈ ಎಲ್ಲ ಯಕ್ಷಗಾನ ಪ್ರಸಂಗಗಳಲ್ಲೂ ವಸ್ತುವಿನ್ಯಾಸ, ವರ್ಣನಾ ವಿಧಾನಗಳಲ್ಲೂ ತೊರವೆ ರಾಮಾಯಣದ ಪ್ರಭಾವವು ಖಚಿತವಾಗಿದೆಯೆನ್ನುವುದು ಗಮನಾರ್ಹ. ಯಕ್ಷಗಾನ ಪ್ರಸಂಗಗಳ ಮೇಲೆ ಕುಮಾರ ವಾಲ್ಮೀಕಿಯು ಬೀರಿದ ಪ್ರಭಾವ ವ್ಯಾಪ್ತಿಯನ್ನು ಗಮನಿಸಿದರೆ ರಾಮಾಯಣದ ಯಕ್ಷಗಾನ ಪ್ರಸಂಗಕರ್ತರ ಪಾಲಿಗೆ ಕುಮಾರ ವಾಲ್ಮೀಕಿಯೇ 'ಆದಿಕವಿ'ಯಾಗಿದ್ದನೆಂದರೂ ಅತಿಶಯೋಕ್ತಿಯಾಗದು.

ತೊರವೆ ರಾಮಾಯಣದಲ್ಲಿ ಕವಿಯು ಸಮಕಾಲೀನ ಸಾಮಾ

ಜಿಕ ಮತ್ತು ರಾಜಕೀಯ ಚಿತ್ರಣ ಅಷ್ಟಷ್ಟಾಗಿ ಮೂಡಿಬಂದಿದೆ. ಜನಜೀವನಕ್ಕೆ ಸಂಬಂಧಿಸಿದ ಬೇಸಾಯ, ನೇಕಾರಿಕೆ, ಶಿಲ್ಪ, ವಾಣಿಜ್ಯ ಮೊದಲಾದುವುಗಳ ಸಾಮಾನ್ಯ ಸ್ಥಿತಿಗತಿಗಳನ್ನು ಊಹಿಸುವುದಕ್ಕೆ ಅವಕಾಶವೊದಗುವ ರೀತಿಯಲ್ಲಿ ಶ್ರೀರಾಮ ಕಥೆಯಲ್ಲಿ ಕವಿಯ ಕಾಲಪ್ರಜ್ಞೆ ಮತ್ತು ಪರಿಸರ ವಿಚಾರಗಳು ಪ್ರತಿಬಿಂಬಿತವಾಗಿವೆ. ಸಮಕಾಲೀನ ಯುದ್ಧ ವಿಧಾನಗಳನ್ನು—ವೀರ ಜೀವನದ ಹಲವು ಮುಖಗಳನ್ನು–ತೊರವೆ ರಾಮಾಯಣ ದಲ್ಲಿ ಗುರುತಿಸುವುದು ಸಾಧ್ಯವೆನಿಸುತ್ತದೆ. ಅಂದಿನ ಇತಿಹಾಸಕ್ಕೆ ಸಂವಾದಿಯಾದ ಶಾಸನಗಳನ್ನು ತೊರವೆ ರಾಮಾಯಣದ ಕೆಲವು ಸನ್ನಿವೇಶಗಳ ಚಿತ್ರಣಗಳನ್ನು ವಿಶ್ಲೇಷಿಸಿದಾಗ ಈ ವಿಚಾರವು ಸ್ಪಷ್ಟವಾಗುತ್ತದೆ. ಸೇವುಣ–ಹೊಯ್ಸಳರ ಘರ್ಷಣೆಗಳನ್ನು, ಹಲವಾರು ಯುದ್ಧಗಳನ್ನು ಕಂಡು ಕೇಳಿರಬಹುದಾದ ಕವಿಯು ತನ್ನ ಕೃತಿಯಲ್ಲಿ ರಾಮ–ರಾವಣರ ಯುದ್ಧವನ್ನು ವರ್ಣಿಸುತ್ತಾ ತನ್ನ ಕಾಲದ ಕೋಟೆಕಾಳಗದ ವಿವಿಧ ಚಿತ್ರಗಳನ್ನು, ಸಮ ಕಾಲೀನ ಆಯುಧ, ಉಡುಪು, ಸೇನಾವ್ಯವಸ್ಥೆಗಳ ರೂಪರೇಖೆ ಗಳನ್ನು ಒಡಮೂಡಿಸಿದ್ದಾನೆಂದು ತರ್ಕಿಸಬಹುದಾಗಿದೆ.

## ಕುಮಾರ ವಾಲ್ಮೀಕಿಯ 'ತತ್ತ್ವ' ದರ್ಶನ

ತನ್ನ ಕಾವ್ಯದ ಆರಂಭ ಭಾಗದಲ್ಲಿ ಕುಮಾರ ವಾಲ್ಮೀಕಿಯು ಮಧ್ವಾಚಾರ್ಯರನ್ನು ತನ್ನ ಗುರುರಾಯರೆಂದು ಕೊಂಡಾಡಿ ದ್ದಾನೆ. ಅವರನ್ನು ನಿರುಪಮ ತತ್ತ್ವ ವಿದ್ಯಾಶರಧಿಯೆಂದು ಸ್ತುತಿಸಿದ್ದಾನೆ. ಮಧ್ವಾಚಾರ್ಯರ 'ತತ್ತ್ವವಾದ'ದ ಪ್ರಮುಖ ಅಂಶಗಳಾದ ವಿಷ್ಣುಸರ್ವೋತ್ತಮತ್ವ, ವಾಯುಜೀವೋತ್ತ ಮತ್ವ, ತಾರತಮ್ಯ ತತ್ತ್ವ, ವಾಯುವಿಗೆ ಸಹಜೀವನ, ಭಾವೀ

ಬ್ರಹ್ಮತ್ವ, ಮಾಯಾಖಂಡನೆ–ಮೊದಲಾದ ವಿಚಾರಗಳು ತೊರವೆ ರಾಮಾಯಣದಲ್ಲಿ ಅಂತರ್ಗತವಾಗಿವೆ. ಕಥಾವಸ್ತುವಿನ್ಯಾಸದಲ್ಲೂ ಮಧ್ವಾಚಾರ್ಯರ 'ಭಾರತತಾತ್ಪರ್ಯ ನಿರ್ಣಯ'ದಲ್ಲಿ ಬರುವ ಶ್ರೀರಾಮಕಥೆಯನ್ನು ಹಲವೆಡೆ ಅನುಸರಿಸಿದ್ದು ಕಂಡುಬರುತ್ತದೆ. ಕನ್ನಡ ನಾಡಿನಲ್ಲಿ ವಿಷ್ಣುಭಕ್ತಿಯ ಪ್ರಚಾರ ಕಾರ್ಯದಲ್ಲಿ ಅಗ್ರ ನಾಯಕತ್ವ ವಹಿಸಿದ ಮಧ್ವಾಚಾರ್ಯರ ತತ್ತ್ವವಾದವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿ, ಶಿಷ್ಯನಾಗಿ ಅವರಿಗೆ ಮಣಿದು–ಶ್ರೀರಾಮನು ವಿಷ್ಣುವಿನ ಅವತಾರವೆಂಬ ಅಚಲ ನಿಷ್ಠೆಯಿಂದ ಅಸಮಾನ ಭಕ್ತಿಭಾವದಿಂದ ರಾಮಾಯಣವನ್ನು ರಚಿಸಿದವನು ಕುಮಾರ ವಾಲ್ಮೀಕಿ. ಅವನ ಕಾಲನಿರ್ಣಯ ಮಾಡುವಲ್ಲೂ ಐತಿಹಾಸಿಕವಾದ ಈ ಅಂಶವನ್ನು ನಾವು ಮರೆಯುವಂತಿಲ್ಲ. ಮಧ್ವಾಚಾರ್ಯರು ಪ್ರತಿಪಾದಿಸಿದ ಹರಿ (ವಿಷ್ಣು) ಭಕ್ತಿಯನ್ನು ಕನ್ನಡ ನಾಡಿನಲ್ಲೆಲ್ಲ ಪ್ರಸಾರ ಮಾಡಿದ ಹರಿದಾಸರ ಹಲವು ಕೃತಿ–ಕೀರ್ತನೆಗಳಲ್ಲೂ–ಕುಮಾರ ವಾಲ್ಮೀಕಿಯ ಪ್ರಭಾವವನ್ನು ಗುರುತಿಸುವುದೂ ಸಾಧ್ಯವಾಗುತ್ತದೆ (ಇದರ ವಿವರವಾದ ವಿವೇಚನೆಗೆ ಇಲ್ಲಿ ಅವಕಾಶ ಸಾಲದು).

## ಕುಮಾರ ವಾಲ್ಮೀಕಿಯ ಕಾಲ, ಪರಿಸರ

ಕುಮಾರ ವಾಲ್ಮೀಕಿಯು ತನ್ನ ಕೃತಿಯಾದ ತೊರವೆ ರಾಮಾಯಣದಲ್ಲಿ ತನ್ನ ನಿಜನಾಮ, ದೇಶ, ಕಾಲ, ಆಶ್ರಯವನ್ನಿತ್ತ ರಾಜ—ಮೊದಲಾದುವುಗಳನ್ನು ಕುರಿತು ಏನನ್ನೂ ಹೇಳಿಲ್ಲ. ಮಧ್ವಾಚಾರ್ಯ (I 1–8) ಮತ್ತು ಕುಮಾರವ್ಯಾಸ (IV 55–67, 68) ಇವರ ಹೆಸರುಗಳು ಮಾತ್ರ ಉಲ್ಲೇಖಿತವಾಗಿವೆ. ಕುಮಾರ ವಾಲ್ಮೀಕಿಯನ್ನು ಸ್ಮರಿಸಿದ ಮೂವರು ಕವಿಗಳು

ಮಾತ್ರ ನಮ್ಮ ಗಮನಕ್ಕೆ ಬರುತ್ತಾರೆ. ಇವರು ಕನಕದಾಸ, ಚೆನ್ನಿಗ ಮತ್ತು ಬಬ್ಬೂರು ರಂಗ. ಇವರಲ್ಲೂ ಬಬ್ಬೂರು ರಂಗನು ಮಾತ್ರ 'ಕುಮಾರ ವಾಲ್ಮೀಕಿ' ಎಂದು ಹೆಸರಿಸಿ–ಸ್ಪಷ್ಟವಾಗಿ ಈತನನ್ನು ನೆನೆದಿದ್ದಾನೆ.

ಕನಕದಾಸನು ತನ್ನ 'ಮೋಹನ ತರಂಗಿಣಿ' ಯಲ್ಲಿ

ಉರಗಾಲಯವೆ ಪೆಸರ್ವಡೆದನ ಮತ್ಸ್ಯೋ
ದರ ಜಾತೆಯಾತ್ಮ ಸಂಭವನ
ವರ ಪುರಾಣಂಗಳ ಕನ್ನಡಿಸಿದ ಕವಿ
ವರರ ಕೊಂಡಾಡುವೆ ಮುದದಿ (ಮೋಹನ ತರಂಗಿಣಿ I–17)

ಎಂದಾಗ 'ಉರಗಾಲಯವೆ ಪೆಸರ್ವಡೆದನ' (ವಾಲ್ಮೀಕಿಯ) ಪುರಾಣ (ರಾಮಾಯಣ) ವನ್ನು ಕನ್ನಡಿಸಿದ ಕವಿವರನೆಂಬ ಹೇಳಿಕೆಯು ಕುಮಾರ ವಾಲ್ಮೀಕಿಗೇ ಸಂಬಂಧಿಸಿದ್ದಿರಬೇಕು ಎಂದು ತರ್ಕಿಸುವುದು ಸಹಜ. ಕನಕದಾಸನ ಕಾಲವನ್ನು ಸುಮಾರು ಕ್ರಿ.ಶ. 1550 ಎಂದು ಗೊತ್ತುಮಾಡಲಾಗಿದೆ.

ಚೆನ್ನಿಗನು ತನ್ನ 'ಪ್ರಹ್ಲಾದ ಚರಿತ್ರೆ'ಯಲ್ಲಿ

ಉತ್ತಮ ಕವಿ ಕಾಳಿದಾಸ ಭಾರತವನು
ವಿಸ್ತರಿಸಿದ ವ್ಯಾಸರಾಯ
ಬತ್ತಲೇಶ್ವರ ವಾಲ್ಮೀಕಿಗಳಂಘ್ರಿಗೆ
ಭಕ್ತಿಯಿಂದಲೇ ವಂದಿಸುವೆ—ಎಂದಿದ್ದಾನೆ

ಇವನ ಕಾಲವು ಕ್ರಿ.ಶ.ಸು. 1700 ಎನ್ನಲಾಗಿದೆ. ಈ ಕವಿ ಸ್ತುತಿಸಿದ 'ವಾಲ್ಮೀಕಿ' ಎಂದರೆ 'ಕುಮಾರ ವಾಲ್ಮೀಕಿ' ಎಂದೇ ಕವಿ ಚರಿತಕಾರರು ನಿರ್ಣಯಿಸಿದ್ದಾರೆ.

ಸುಮಾರು ಕ್ರಿ.ಶ. 1750 ರ ಕಾಲದ ಬಬ್ಬೂರು ರಂಗನು ತನ್ನ 'ಅಂಬಿಕಾವಿಜಯ'ದಲ್ಲಿ ಕುಮಾರವ್ಯಾಸ, ಅವನ ಬಳಿ

ವಿಡಿದು ಶ್ರೀ ರಾಮಚರಿತವ ಬೆಳಗಿದ ಕುಮಾರ ವಾಲ್ಮೀಕಿಯರನ್ನು ಸ್ತುತಿಸಿದ್ದಾನೆ. ಹದಿನೆಂಟನೆಯ ಶತಮಾನದ ಈ ಕವಿಯ ಸಂಸ್ಮರಣೆಯೂ ಕುಮಾರ ವಾಲ್ಮೀಕಿಯ ಕಾಲ ನಿರ್ಣಯಕ್ಕೆ ನೆರವಾಗುವುದಕ್ಕಿಂತಲೂ ಹೆಚ್ಚಾಗಿ, ಅವನ ಪ್ರಸಿದ್ಧಿ, ಜನಪ್ರಿಯತೆಗಳ ವ್ಯಾಪ್ತಿಯನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತದೆ. ಸುಮಾರು 14 ಮಂದಿ ವಿದ್ವಾಂಸರು ಕುಮಾರ ವಾಲ್ಮೀಕಿಯ ಕಾಲವನ್ನು ಕುರಿತು ವಿಚಾರಿಸುತ್ತಾ– ಆ ಕುರಿತು ಸ್ವತಂತ್ರವಾದ ಆಧಾರಗಳು ದೊರೆಯದ್ದರಿಂದ ಕುಮಾರವ್ಯಾಸನ ಕಾಲವನ್ನು ಊಹಿಸಿ, ಅವನ ಕಾಲದ ತರುವಾಯ ಕುಮಾರ ವಾಲ್ಮೀಕಿ ಇದ್ದನೆಂಬ ಹೇಳಿಕೆಯನ್ನು ಮಾತ್ರ ಸಮ್ಮತಿಸುತ್ತ ಬಂದಿದ್ದಾರೆ.

ಕುಮಾರ ವಾಲ್ಮೀಕಿಯ ಕಾಲನಿರ್ಣಯದಲ್ಲಿ ಕುಮಾರವ್ಯಾಸ, ಮಧ್ವಾಚಾರ್ಯ ಮತ್ತು ಕವಿ ನರಹರಿ– ಈ ಮೂವರ ಕಾಲಗಳಿಗೆ ಆದ್ಯತೆ ಕೊಡಬೇಕಾಗುತ್ತದೆ. ಮೊದಲಿನ ಇಬ್ಬರನ್ನು ಇವನು ತನ್ನ ಕೃತಿಯಲ್ಲಿ ಸ್ಮರಿಸಿದ್ದು ಅವರ ಕಾಲವು ಕುಮಾರ ವಾಲ್ಮೀಕಿಯ ಕಾಲದ ಹಿಂದಣ ಗಡಿಯಾಗಿಯೂ, ಇವನ ಪ್ರಭಾವಕ್ಕೊಳಗಾದ ಕವಿ ನರಹರಿಯ ಕಾಲವು ಇತ್ತೀಚಿನ ಗಡಿಯಾಗಿಯೂ ಪರಿಗಣಿಸಲ್ಪಡಬೇಕು. ಕುಮಾರವ್ಯಾಸನ ಕಾಲದ ಬಗೆಗೆ ಈಗಾಗಲೇ ಸಾಕಷ್ಟು ವಿಚಾರ ನಡೆದಿದ್ದರೂ ಸರ್ವಮಾನ್ಯವಾದ ಖಚಿತ ನಿರ್ಧಾರಕ್ಕೆ ಅದು ತಲಪಿದಂತಿಲ್ಲ. ಕುಮಾರ ವಾಲ್ಮೀಕಿಯ ಕಾಲವನ್ನು ಸ್ವತಂತ್ರವಾದ (ಕುಮಾರ ವ್ಯಾಸನ ಕಾಲದ ಕುರಿತಾದ ಊಹಾಪೋಹಗಳಿಗೆ ಹೊರತಾದ) ಆಂತರಿಕ, ಬಾಹ್ಯ ಪ್ರಮಾಣಗಳಿಂದ ನಿರ್ಣಯಿಸುವುದು ಸಾಧ್ಯವಾದಲ್ಲಿ, ಕುಮಾರವ್ಯಾಸನ ಈಚಿಗಿನ ಗಡಿಯನ್ನು ಗುರುತಿಸುವಲ್ಲಿ

ನಿಖರವಾದ ನೆಲೆಯನ್ನು ತಲಪಿದಂತಾಗುತ್ತದೆ. ಈ ಸಂಬಂಧವಾಗಿ ಪ್ರಾಮಾಣಿಕವಾದ ಪ್ರಯತ್ನವನ್ನು ಇಲ್ಲಿ ನಡೆಸಲಾಗಿದೆ.

ಕುಮಾರ ವಾಲ್ಮೀಕಿಯು ತಾನು ಸ್ತುತಿಸಿದ ಗುರುರಾಯ ಮಧ್ವಾಚಾರ್ಯರ ಕಾಲವು ಕ್ರಿ.ಶ. 1199–1278 ಎಂದೂ, ಕ್ರಿ.ಶ. 1238–1317 ಎಂದೂ ಎರಡು ಅಭಿಪ್ರಾಯಗಳು ವಿದ್ವಾಂಸರಲ್ಲಿ ಪ್ರಚಲಿತವಾಗಿವೆ. ಕುಮಾರ ವಾಲ್ಮೀಕಿಯ ಕಾಲ ನಿರ್ಣಯಕ್ಕೆ ಈ ಎರಡು ಅಭಿಮತಗಳಿಂದಲೂ ತೊಡಕಾಗುವುದಿಲ್ಲ.

ಆಚಾರ್ಯರ ಪ್ರಭಾವವು ಇಂದಿನ ಬಿಜಾಪುರ (ತೊರವೆ) ದ ಸುತ್ತ ಮುತ್ತಲೂ ಹರಡಿತ್ತೆನ್ನುವುದಕ್ಕೆ ಅವರ ಜೀವನದ ಕೆಲವು ಘಟನೆಗಳು ಆಧಾರಗಳಾಗಿವೆ. ಹೀಗಾಗಿ ಮಾಧ್ವತತ್ತ್ವ ಪ್ರಭಾವವು ಇನ್ನು ತನ್ನ ಹೊಸ ಕಳೆಯನ್ನು ಬೆಳಗುತ್ತಿದ್ದ ಕಾಲದಲ್ಲಿ, ಎಂದರೆ, 14ನೇ ಶತಕದಲ್ಲಿ ಕುಮಾರ ವಾಲ್ಮೀಕಿಯು ತನ್ನ ಕೃತಿ ರಚನೆ ಮಾಡಿದ್ದಿರಬೇಕು. ಈ ಅಂಶವನ್ನು ಸಮರ್ಥಿಸಲು ಇತರ ಪ್ರಮಾಣಗಳೂ ನೆರವಾಗುತ್ತವೆ–ಎನ್ನುವುದೂ ಗಮನಾರ್ಹ.

ಕುಮಾರ ವಾಲ್ಮೀಕಿಯ ಕಾಲದ ಈಚೆಗಿನ ಎಲ್ಲೆಯನ್ನು ನಿರ್ಣಯಿಸುವಲ್ಲಿ 'ಮೈರಾವಣ ಕಾಳಗ'ದ ಕವಿ ನರಹರಿಯ ಹೇಳಿಕೆಗೆ ಆದ್ಯತೆ ಸಲ್ಲಬೇಕು. ನರಹರಿಯು 'ವಿದ್ಯಾಶಂಕರ' ರನ್ನು ತನ್ನ ಗುರುವೆಂದು ಸ್ತುತಿಸಿದ್ದಾನೆ. 'ವಿದ್ಯಾಶಂಕರ'ರ ಕಾಲವೆಂದರೆ ಕ್ರಿ.ಶ. 1229–1333. ಇದರಿಂದ ಕವಿ ನರಹರಿಯು 14ನೆಯ ಶತಕದಲ್ಲಿ, ಹೆಚ್ಚೆಂದರೆ ಆ ಶತಕದ ಉತ್ತರಾರ್ಧದಲ್ಲಿ ಬಾಳಿದ್ದಿರಬೇಕು.

'ಮೈರಾವಣ ಕಾಳಗ'ದ ಕವಿ ನರಹರಿಯೇ 'ತೊರವೆ

ರಾಮಾಯಣ' ರಚಿಸಿದ ಕುಮಾರ ವಾಲ್ಮೀಕಿಯಾಗಿದ್ದಿದ್ದರೆ ಕಾಲ ನಿರ್ಣಯದಲ್ಲಿ ತೊಡಕು ಇರುತ್ತಿರಲಿಲ್ಲ. ಆದರೆ ನರಹರಿಯೇ ಕುಮಾರ ವಾಲ್ಮೀಕಿಯಲ್ಲವೆಂದೂ ಅವನು ಕುಮಾರ ವಾಲ್ಮೀಕಿಯ ಸಮೀಪವರ್ತಿ ಪ್ರಭಾವಕ್ಕೊಳಗಾದವನೆಂದೂ ಎರಡೂ ಕೃತಿಗಳ ತುಲನಾತ್ಮಕ ಅಭ್ಯಾಸದಿಂದ ಖಚಿತವಾಗುತ್ತದೆ.

'ಮೈರಾವಣ ಕಾಳಗ'ದ ಕವಿ ತನ್ನ ಹೆಸರನ್ನು ನರಹರಿ ಎಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಅವನ ಕಾವ್ಯದ ಅಧಿಪತಿ 'ತೊರವೆಯ ರಘುನಾಥ' ಗುರು ವಿದ್ಯಾಶಂಕರ. ಅವನ ಕೃತಿ ರಚನೆಗೆ ಮಾರ್ಗದರ್ಶನ ನೀಡಿದವನು–ರಾಮಾಯಣವನ್ನು ದುರಿತನಾಶನವೆಂದು ಬಗೆದ ವಾಲ್ಮೀಕಿ ಮುನಿರಾಯ—ಎಂದರೆ ಕುಮಾರ ವಾಲ್ಮೀಕಿ. 'ಮೈರಾವಣ ಕಾಳಗ'ದ ಉದ್ದಕ್ಕೂ ಕುಮಾರ ವಾಲ್ಮೀಕಿಯ ಕೃತಿಯ ಪ್ರಭಾವ ಸ್ಪಷ್ಟವಾಗಿದೆ. ತಾನು ರಾಮಾಯಣ ರಚಿಸಿದ್ದಾಗಿಯಾಗಲೀ, ತನಗೆ 'ಕವಿರಾಜ ಹಂಸ' ಅಥವಾ 'ಕುಮಾರ ವಾಲ್ಮೀಕಿ'—ಎಂಬ ಹೆಸರಿದ್ದುದಾಗಿ ಯಾಗಲೀ—ಕವಿ ನರಹರಿ ಎಲ್ಲೂ ಹೇಳಿಕೊಂಡಿಲ್ಲ.

ತೊರವೆ ರಾಮಾಯಣದ ಕವಿ ಕುಮಾರ ವಾಲ್ಮೀಕಿಯ ಕಾವ್ಯಾಧಿಪತಿ 'ತೊರವೆಯ ನರಹರಿ'. ಇವನ ಗುರು ತತ್ತ್ವ ವಿದ್ಯಾಶರಧಿ 'ಮಧ್ವಾಚಾರ್ಯ'. ಕವಿ ತನ್ನ ಹೆಸರು 'ನರಹರಿ' ಯೆಂದಾಗಲೀ, ತಾನು ಇನ್ನೊಂದು ಕೃತಿ ರಚನೆ ಮಾಡಿರುವೆ ನೆಂದಾಗಲೀ ಎಲ್ಲೂ ಹೇಳಿಕೊಂಡಿಲ್ಲ.

ಇವೆಲ್ಲ ಅಂಶಗಳಿಂದ ಆ ಎರಡು (ತೊರವೆ ರಾಮಾಯಣ ಮತ್ತು ಮೈರಾವಣ ಕಾಳಗ) ಕೃತಿಗಳು ಭಿನ್ನ ಕರ್ತೃಗಳಿಂದ ರಚಿತವಾದುವುಗಳೆಂದು ಸಿದ್ಧವಾಗುತ್ತವೆ. ಇದರಿಂದ 14ನೆಯ ಶತಮಾನದ ಉತ್ತರಾರ್ಧದಲ್ಲಿ ರಚಿತವಾಗಿರಬಹುದಾದ

'ವೈರಾವಣ ಕಾಳಗ'ದ ಮೇಲೆ ಪ್ರಭಾವ ಬೀರಿದ ತೊರವೆ ರಾಮಾಯಣವು ಆ ಶತಮಾನದ ಮಧ್ಯಭಾಗದಲ್ಲಿ ರಚಿತವಾಗಿರಬಹುದು. ಅಥವಾ ಆ ಇಬ್ಬರು ಕವಿಗಳೂ ಆ ಶತಕದ ಉತ್ತರಾರ್ಧದಲ್ಲಿ ಸಮಕಾಲೀನರಾಗಿ ಬಾಳಿರಬಹುದು. ತೊರವೆ ಕ್ಷೇತ್ರವು ಅವರಿಬ್ಬರನ್ನು ಒಂದುಗೂಡಿಸಿರಬಹುದು.

ಕುಮಾರ ವಾಲ್ಮೀಕಿಯು 14 ನೆಯ ಶತಕದವನು ಎಂಬ ನಿಲುಮೆಗೆ ಪೋಷಕವಾಗಿರುವ ಇನ್ನು ಕೆಲವು ಸಂಗತಿಗಳನ್ನು ಇಲ್ಲಿ ಉಲ್ಲೇಖಿಸಬಹುದು :

(೧) ತೊರವೆ ರಾಮಾಯಣದಿಂದ ಸ್ಪಷ್ಟ ಪ್ರಭಾವ ಹೊಂದಿದ ಇನ್ನೊಂದು ರಾಮಾಯಣದ ಕವಿ ಬತ್ತಲೇಶ್ವರನ ಕಾಲವನ್ನು ಆ ಕೃತಿಯ ಸಂಪಾದಕರಾದ ಡಾ. ಶಿವರಾಮ ಕಾರಂತರು ಕ್ರಿ.ಶ. 1500ರ ಪೂರ್ವಕ್ಕೆ ಸರಿಯಿಸಬಹುದು ಎಂದಿದ್ದಾರೆ. 'ಇದರಿಂದಲೂ ತೊರವೆ ರಾಮಾಯಣದ ಕಾಲ ಕ್ರಿ.ಶ. 14ನೆ ಶತಮಾನವೆಂಬ ನಿರ್ಣಯಕ್ಕೆ ಪ್ರಬಲ ಆಧಾರ ಸಿಕ್ಕಂತಾಗಿದೆ.

(೨) ಇಂದು ತೊರವೆಯ ದೇವಾಲಯದಲ್ಲಿ ನರಹರಿ ಮೂರ್ತಿಯು ಸುಮಾರು 10 ಅಡಿ ಆಳದಲ್ಲಿ ಗುಹಾವಾಸಿಯಾಗಿದೆ. ಕುಮಾರ ವಾಲ್ಮೀಕಿಯ ಕಾಲದಲ್ಲಿ ಹೀಗಿರಲಿಲ್ಲವೆಂದು ತೋರುತ್ತದೆ. ತನ್ನ ಕಾವ್ಯದಲ್ಲಿ ಎಲ್ಲೂ–'ಗುಹಾವಾಸಿ ನರಹರಿಯು' ಬಗ್ಗೆ ಪ್ರಸ್ತಾಪಿಸಿಲ್ಲ. ತೊರವೆಯ ಪುರವರ, ತೊರವೆಯ ನಗರ ಎಂದು ಕ್ಷೇತ್ರವನ್ನು ವರ್ಣಿಸುತ್ತಾ, ಅಯೋಧ್ಯೆಯ ವೈಭವವನ್ನು—'ಹಿರಣ್ಯಕ ಭಂಗ ನಂತಗ್ರ್ಯಹದವೊಲ್ ಲಕ್ಷ್ಮೀ ವಿಲಾಸಮಯ' (ತೊ.ರಾ. I 9–7)—ಎಂದು ಹೋಲಿಸಿ ತೊರವೆಯ ಸಮೃದ್ಧ ಸ್ಥಿತಿಯನ್ನೇ ಕವಿಯು

ಧ್ವನಿಸಿದ್ದಾನೆ. ಮುಂದೆ ಕ್ರಿ.ಶ. 15–16ನೇ ಶತಮಾನಗಳಲ್ಲಿ ಮೂರ್ತಿಭಂಜಕರ ಭಯದಿಂದ ನರಹರಿಯನ್ನು ಗುಹಾವಾಸಕ್ಕೊಳ ಪಡಿಸಿದ್ದಿರಬೇಕು. ಈ ಪರಿಸ್ಥಿತಿಯ ಮೊದಲೇ—ತೊರವೆಯ ವೈಭವದ ದಿನಗಳಲ್ಲೇ—ಎಂದರೆ, 14ನೆಯ ಶತಮಾನದಲ್ಲೆ ಕವಿಯು ನರಹರಿಯ ಸನ್ನಿಧಿಯಲ್ಲಿ ಕೃತಿರಚನೆ ಮಾಡಿರಬೇಕು.

(೩) ದಶರಥನು ನಡೆಸಿದ ಯಜ್ಞಗಳಿಗೆ ವೈಷ್ಣವ, ಶೈವ, ಕಾಪಾಲಿಕರೊಂದಿಗೆ ಬೌದ್ಧರೂ ಬಂದಿದ್ದಾರೆ ಎನ್ನುತ್ತಾನೆ ಕುಮಾರ ವಾಲ್ಮೀಕಿ (ತೊ.ರಾ. I 7–22). ಕನ್ನಡ ನಾಡಿನಲ್ಲಿ ಬೌದ್ಧ ಧರ್ಮವು ತನ್ನ ಅಸ್ತಿತ್ವವನ್ನು ಉಳಿಸಿಕೊಂಡ ಕಾಲದ ಕೊನೆಯ ಗಡುವೆಂದರೆ 14ನೇ ಶತಮಾನ. ಐತಿಹಾಸಿಕವಾದ ಈ ಅಂಶವೂ ಕವಿಯ ಕಾಲ ನಿರ್ಣಯಕ್ಕೆ ಪೋಷಕವಾಗಿದೆ.

ಅಷ್ಟಲ್ಲದೆ ಜಂಗಮ, ಜೋಗಿ, ಸವಣ, ತಲೆಬೋಳಿಸಿ ಕೊಂಡ ಸನ್ಯಾಸಿ, ದಿಗಂಬರ—ಇವರೆಲ್ಲರನ್ನೂ ಕುರಿತೂ ತೊರವೆ ರಾಮಾಯಣದಲ್ಲಿ ಉಲ್ಲೇಖಗಳಿವೆ. ವಾಲ್ಮೀಕಿ ರಾಮಾಯಣ ದಲ್ಲಿ ಶಿಖಿ ಧರಿಸಿದ ತ್ರಿದಂಡಿ ಸನ್ಯಾಸಿಯ ವರ್ಣನೆಯಿರುವ ಸನ್ನಿವೇಶದಲ್ಲಿ, ಕನ್ನಡದ ಕವಿಯು 'ಶಿರದ ಮುಂಡನ'ದ ಸನ್ಯಾಸಿ ಯನ್ನು ಚಿತ್ರಿಸಿದ್ದಾನೆ. ಕ್ರಿ.ಶ. 12–14ನೇ ಶತಮಾನಗಳ ಸೇವುಣರ ಕಾಲದಲ್ಲಿ ಜೈನಧರ್ಮವು ಇಂದಿನ ಬಿಜಾಪುರದ ಸುತ್ತ ಮುತ್ತಲೂ ಪ್ರಬಲವಾಗಿತ್ತು. ತೊರವೆ ರಾಮಾಯಣದಲ್ಲಿನ ಹೇಳಿಕೆಗಳನ್ನು ಕಂಡರೆ—ಜೈನಧರ್ಮವು ಸಾಕಷ್ಟು ಪ್ರಚಾರ ದಲ್ಲಿದ್ದ–ಎಂದರೆ 14ನೆಯ ಶತಮಾನದಲ್ಲಿ–ಕವಿಯು ಬಾಳಿದ್ದಿರ ಬೇಕು—ಎಂಬ ನಿರ್ಣಯಕ್ಕೆ ದೃಢತೆ ಬರುತ್ತದೆ.

(೪) ತೊರವೆ ರಾಮಾಯಣದಲ್ಲಿ ಉಕ್ತವಾದ ಬಿರುದುಗಳಲ್ಲಿ ಹಲವು 12–14ನೇ ಶತಮಾನಗಳ ಶಾಸನಗಳಲ್ಲೂ ದೊರೆಯು ತ್ತದೆ.

| ತೊರವೆ ರಾಮಾಯಣದಲ್ಲಿ | 12-14ನೇ ಶತಕಗಳ ಶಾಸನಗಳಲ್ಲಿ |
| --- | --- |
| ರಘುಕುಲ ಸಮುದ್ರೋದ್ಧರಣ (II 1-5) | ಚತುಸ್ಸಮಯ ಸಮುದ್ರೋದ್ಧರಣ (S.I.I. 11-3-177) |
| ಮಲೆವರಿಪು ನೃಪ ಸೂರೆಕಾರ (VI 10-45) | ಮಲೆವರಿಪು ನೃಪ ಸೂರೆಕಾರ (S.I.I. 11-3-207) |
| ಮಲೆಪ ಸುಭಟರ ಗಂಡ (VI 20-22) | ಮಲೆಪ ಸುಭಟರ ಗಂಡ (S.I.I. 11-3-207) |
| ಅರಿದಿಶಾಪಟ ಮಲ್ಲ (VI 6-45) | ಅರಿದಿಶಾಪಟ ಮಲ್ಲ (S.I.I. 11-3-207) |

(೫) ಕವಿಯು ತನ್ನ ಕೃತಿಯಲ್ಲಿ ಬಳಸಿದ ನಿಯೋಗಿ, ಮನ್ನೆಯ, ಅಷ್ಟಾದಶ, ಮಹಾಪ್ರಜೆ, ಮಂಡಳೇಶ್ವರ, ಸಂಧಿ ವಿಗ್ರಹಿ ನಾಯಕವಾಡಿ, ಸಾಮಂತ—ಇಂತಹ ಅಧಿಕಾರಸೂಚಕ ಪದಗಳೂ, ಪದವಿಗಳೂ, ಕಾವ್ಯದಲ್ಲಿ ಉಕ್ತವಾದ ಕೊಂಕಣ, ಕುಂತಳ, ಸಿಂಗಣದರಸು ಭೂಮಿಗಳೂ—ಸೇವುಣರ (ಕ್ರಿ.ಶ. 13–14 ಶತಕ) ಕಾಲವನ್ನೇ ಸೂಚಿಸುತ್ತವೆ.

(೬) ಹಿಂದೆಯೇ ಉಲ್ಲೇಖಿಸಿದಂತೆ—ಮೈರಾವಣ ಕಾಳಗ, ಬತ್ತಲೇಶ್ವರನ ರಾಮಾಯಣ, ಹನುಮದ್ರಾಮಾಯಣ, ಕಪೋತ ಚರಿತೆ,—ಬಹುಮಟ್ಟಿಗೆ ರಾಮಕಥಾನಕವುಳ್ಳ ಎಲ್ಲ ಯಕ್ಷಗಾನ ಪ್ರಸಂಗಗಳು—ಇವೆಲ್ಲವುಗಳ ಮೇಲೆ ಪ್ರಭಾವ ಬೀರಿದ ತೊರವೆ ರಾಮಾಯಣವು ಕ್ರಿ.ಶ. 14ನೆಯ ಶತಕದಲ್ಲಿ ರಚಿತವಾದದ್ದು ಎಂದರೆ ಆ ಕಾಲದ ಪರಿಸ್ಥಿತಿಯಲ್ಲಿ ಪರಿಣಾಮ, ಪ್ರಭಾವಗಳ ವ್ಯಾಪ್ತಿಗೆ ಅಗತ್ಯವಾಗಿದ್ದ ಕಾಲಾವಕಾಶವೂ ಇದ್ದಂತಾಗುತ್ತದೆ.

ಕವಿಯ ಕಾಲ, ಪರಿಸರಗಳನ್ನು ಕುರಿತಾದ ಅಧ್ಯಯನ, ಸಂಶೋಧನೆ, ವಿಶ್ಲೇಷಣೆಗಳಿಂದ ತಿಳಿದುಬರುವ ಮುಖ್ಯಾಂಶಗಳು.

1 'ತೊರವೆ' ಎಂಬ ಹೆಸರು 7ನೆಯ ಶತಮಾನದಷ್ಟು ಪ್ರಾಚೀನವೆನ್ನುವುದು ಶಾಸನಾಧಾರದಿಂದ ಖಚಿತವಾಗಿದೆ.

2 ತೊರವೆ ನರಹರಿ ಕ್ಷೇತ್ರವು 12ನೇ ಶತಮಾನದಲ್ಲೇ ಜಾಗೃತಸ್ಥಾನವೆನಿಸಿತ್ತು, ಭಕ್ತರನ್ನು ತನ್ನೆಡೆಗೆ ಆಕರ್ಷಿಸಿತ್ತು, ರಾಜಾಶ್ರಯವನ್ನು ಹೊಂದಿತ್ತು.

3 ತೊರವೆ ರಾಮಾಯಣದ ಕವಿ ಕುಮಾರ ವಾಲ್ಮೀಕಿಯೇ ಮೈರಾವಣ ಕಾಳಗದ ಕರ್ತೃವಾದ ನರಹರಿಯಲ್ಲ. ಅವರಿಬ್ಬರೂ ಭಿನ್ನರು.

4 ಮಧ್ವಶಿಷ್ಯನಾದ ಕುಮಾರ ವಾಲ್ಮೀಕಿಯು ಕ್ರಿ.ಶ. 14ನೇ ಶತಕದ ಮಧ್ಯಭಾಗದವನು.

5 ತೊರವೆ ರಾಮಾಯಣದಲ್ಲಿ ಸೇವುಣ–ಹೊಯ್ಸಳರ ಕಾಲದ ಸಮಾಜ, ಪರಿಸರಗಳ ಸುಳವು–ಹೊಳವು ಸಿಕ್ಕುತ್ತದೆ.

6 ಇದರಿಂದ, ಕುಮಾರವ್ಯಾಸನ ಕಾಲವು ಕ್ರಿ.ಶ. 14ನೆಯ ಮಧ್ಯಭಾಗಕ್ಕಿಂತ ಹಿಂದಿನದಾಗಿರಬೇಕು.

## ಕನ್ನಡ ಸಾಹಿತ್ಯದಲ್ಲಿ ಕುಮಾರ ವಾಲ್ಮೀಕಿಯ ಸ್ಥಾನ, ಮಹತ್ವ

'ತರಣಿದರ್ಶನಕ್ಕಿಂತ ಕಿರಣಾನುಭವ ಸುಲಭ'—ಎನ್ನುವಂತೆ ಕನ್ನಡದ ಭಕ್ತಜನ ಸಮುದಾಯಕ್ಕೆ ಮತ್ತು ಕನ್ನಡದ ಹಲವು ರಾಮಾಯಣದ ಕವಿಗಳಿಗೆ ಆದಿಕವಿ ವಾಲ್ಮೀಕಿಯ ಮಹಾಕಾವ್ಯ ರಾಮಾಯಣಕ್ಕಿಂತಲೂ, ಕುಮಾರ ವಾಲ್ಮೀಕಿಯ ತೊರವೆ ರಾಮಾಯಣವು ಹೆಚ್ಚು ಸಮೀಪವರ್ತಿಯೂ, ಅನುಸರಣ

ಯೋಗ್ಯವೂ ಎನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಕುಮಾರ ವಾಲ್ಮೀಕಿಯ ವಚೋವಿಲಾಸ ನಿರರ್ಗಳವಾಗಿದ್ದು, ಕಥೆಯನ್ನು ನೇರವಾಗಿ, ಸರಳವಾಗಿ ಹೇಳಬಲ್ಲವನಾದುದರಿಂದ ಅವನ ರಾಮಾಯಣವು ಸಾಮಾನ್ಯಜನತೆಯ ದೃಷ್ಟಿಯಿಂದ ಕನ್ನಡದ ಹಿರಿಯ ಸಂಸ್ಕೃತಿಗಳಲ್ಲಿ ಒಂದಾಗಿದೆ. ಪಂಡಿತಪ್ರಿಯನಲ್ಲವಾದರೂ ಕುಮಾರ ವಾಲ್ಮೀಕಿಯು ಪಾಮರರಂಜಕ, ಭಕ್ತಪೋಷಕ. ತನ್ನ ಉದ್ದೇಶ, ಮನೋಧರ್ಮಗಳಿಗನುಗುಣವಾದ ರೀತಿಯಲ್ಲಿ, ವಾಲ್ಮೀಕಿ ಮಹಾಕವಿಯ ಕಾವ್ಯಸುಧೆಯ ಸವಿಯನ್ನು ಕನ್ನಡದ ನಾಲಗೆಗೆ ಪ್ರಪ್ರಥಮವಾಗಿ ನೀಡಿದ ಧನ್ಯತೆ ಕುಮಾರ ವಾಲ್ಮೀಕಿಗೆ ಸಲ್ಲುತ್ತದೆ. ತನ್ನ ಕೃತಿಯ ಮೂಲಕ ಸಹೃದಯರಲ್ಲಿ, ಆದಿಕಾವ್ಯದ ರಸಸಮಾರಾಧನೆಗೆ ಪ್ರಚೋದನೆಯೀಯುವ ಯಶಸ್ಸೂ ಕುಮಾರ ವಾಲ್ಮೀಕಿಗೇ ಸೇರಬೇಕು. ತೊರವೆ ರಾಮಾಯಣದಂತಹ ವಾಚ್ಯಾರ್ಥ ಪ್ರಧಾನವಾದ ಕೃತಿಗಳ ಅಭ್ಯಾಸವು—ವ್ಯಂಗ್ಯಾರ್ಥವು ಪ್ರಧಾನವಾಗಿ ಉಳ್ಳ ಧ್ವನಿಪೂರ್ಣವಾದ ಮಹಾಕಾವ್ಯಗಳ ಸೌಂದರ್ಯದರ್ಶನ ಮಾಡುವುದಕ್ಕೆ ಸಹಕಾರಿಯಾಗಿದೆ—ಎನ್ನುವುದು ಸ್ಮರಣೀಯ.

ತೊರವೆ ರಾಮಾಯಣವು ಗಮಕಿಗಳಿಗೆ ಪ್ರಿಯವಾದ ಗ್ರಂಥ; ತನ್ನ ಗೇಯತೆ, ಸರಳತೆ, ದೇಸಿಯಸತ್ತ್ವಗಳಿಂದಾಗಿ ಈ ಕೃತಿಯು ಕನ್ನಡದ ರಾಮಕಥಾನಕಗಳುಳ್ಳ ಯಕ್ಷಗಾನ ಪ್ರಸಂಗಗಳ ಕವಿಗಳಿಗೆ ಆಕರಗ್ರಂಥವಾಗಿ ಮೆರೆಯುತ್ತಿದೆ. ತನ್ನ ಕಾಲಾನಂತರದ ರಾಮಕಥಾ ಸಾಹಿತ್ಯದ ಮೇಲೆ ತೊರವೆ ರಾಮಾಯಣವು ಒಂದಲ್ಲ ಒಂದು ರೀತಿಯಿಂದ ಪ್ರಭಾವ ಬೀರಿದ್ದೂ ಅದರ ಹಿರಿಮೆಗೆ ಸಾಕ್ಷಿ.

ಅಲೌಕಿಕಶಕ್ತಿ ಕಡಿಮೆ ಇರುವ “ಸಾಹಿತ್ಯ ಕವಿಗಳಿಗಿಂತ

ನಮ್ಮ ಭಕ್ತಕವಿಗಳ ಸತ್ತ್ವ ಹಿರಿದು. ಕನ್ನಡಿಗರ ವೈಭವ, ಪರಾಕ್ರಮ ಸಾಹಸಗಳನ್ನು ಎತ್ತಿ ಹಿಡಿದ ನಮ್ಮ ಕಲಿ ಕವಿಗಳು ಕಡಮೆಯವರಲ್ಲ, ಸಂಸಾರದಲ್ಲಿ ರಸಿಕತೆಯನ್ನು ಹದಕ್ಕೆ ತಂದ ವಾಣಿ ನಿಜವಾಗಿಯೂ ಸವಿನುಡಿಯೇ. ಆದರೂ, ತಮ್ಮ ಜೀವನ ವನ್ನೇ ದಿವ್ಯಕೃತಿಯಾಗಿ ಮಾಡಿ ಅದರ ಉಚ್ಛ್ವಾಸದಂತೆ ವಚನ-ಪದಗಳನ್ನು ಹಾಡಿದ ನಮ್ಮ ಶರಣರ, ದಾಸರ ಶಕ್ತಿ ಹೆಚ್ಚಿನದು[1]. ಇಂತಹ ದಾಸಕವಿಗಳ ಸಾಲಿಗೆ ಕುಮಾರ ವಾಲ್ಮೀಕಿ ಯನ್ನು ಸೇರಿಸಬಹುದು. ಪಂಡಿತರನ್ನು ಮೆಚ್ಚಿಸಿ ತಲೆದೂಗಿ ಸುವ ಪ್ರೌಢಿಮೆಗಿಂತಲೂ, ಸಂಸಾರಾಸಕ್ತಿಯನ್ನು ಕುದುರಿಸುವ ರಸಿಕತೆಗಿಂತಲೂ ಹೆಚ್ಚಾಗಿ ಸಾಮಾನ್ಯರ ಹೃದಯವನ್ನರಳಿಸಿ ಅಲ್ಲಿ ದಿವ್ಯ ಪ್ರಜ್ಞೆಯನ್ನು ಮೂಡಿಸುವ ಸರಳತೆಯೇ ಕುಮಾರ ವಾಲ್ಮೀಕಿಯ ಕಾವ್ಯಯೋಗ.

"ವಾಲ್ಮೀಕಿಯ ರಾಮಾಯಣವನ್ನು ಕನ್ನಡಕ್ಕೆ ಇಳಿಸುವುದರ ಮೂಲಕ ಕುಮಾರ ವಾಲ್ಮೀಕಿಯು ಕನ್ನಡಕ್ಕೆ ಹಿರಿದಾದ ಉಪಕಾರ ಮಾಡಿದ್ದಾನೆ. ಕನ್ನಡ ಜನಪದವನ್ನು ಸಂಸ್ಕರಿಸಲು ಈ ಕವಿಯು ಬಹಳ ಸಹಾಯ ಮಾಡಿದ್ದಾನೆ. ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಈ ಕವಿಗೆ ಸಲ್ಲಬೇಕಾದ ಕಾಣಿಕೆ ಇನ್ನೂ ಸಲ್ಲಿಸ ಲ್ಪಟ್ಟಿಲ್ಲ"[2]—ಎನ್ನುವ ಹೇಳಿಕೆ ಯಥಾರ್ಥವಾಗಿದೆ. ಹೀಗಾಗಿ, ಕುಮಾರ ವಾಲ್ಮೀಕಿಯ ಕೃತಿಯ ಕಡೆಗೆ ಆಧುನಿಕ ವಿಮರ್ಶೆಯ ಮಾನದಂಡ ಹಿಡಿದು ನುಗ್ಗುವುದಕ್ಕಿಂತ, ಕೃತಜ್ಞತೆಯ ಕಾಣಿಕೆ ಹಿಡಿದು ವಿನಯದಿಂದ ಹೆಜ್ಜೆಯಿರಿಸುವುದು ಲೇಸು.

---

[1] ದ. ರಾ. ಬೇಂದ್ರೆ—ಸಾಹಿತ್ಯ ಮತ್ತು ವಿಮರ್ಶೆ ಪು. 31-32

[2] ಸ. ಸ. ಮಾಳವಾಡ—ಸಾಹಿತ್ಯ ಸಂಗಮ ಪು. 52

## ಹೆಚ್ಚಿನ ಓದಿಗೆ-ಮುಖ್ಯ ಗ್ರಂಥಗಳಲ್ಲಿ ಕೆಲವು


1 ತೊರವೆ ರಾಮಾಯಣ (ಕುಮಾರ ವಾಲ್ಮೀಕಿ) ೧ ಸಂ : ಭಾರತಿ ಸಂಪಂಗಿ ರಾಮಯ್ಯ–ಕೃಷ್ಣಯ್ಯಶೆಟ್ಟಿ ಪ್ರಕಟಣೆ
೨. ಸಂ : ಎನ್. ಬಸವಾರಾಧ್ಯ ಸಂಪುಟ–I
ಸಂ : ಬಿ. ಎಸ್. ಸಣ್ಣಯ್ಯ ಸಂಪುಟ–II
(ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟಣೆಗಳು)

2 ತೊರವೆ ರಾಮಾಯಣ ಸಂಗ್ರಹ :
ಸಂ : ಎಲ್. ಬಸವರಾಜು, ಎನ್. ಬಸವಾರಾಧ್ಯ

3 ಮೈರಾವಣ ಕಾಳಗ (ನರಹರಿ) :
ಸಂ : ಮಂ. ಅ. ರಾಮಾನುಜ ಅಯ್ಯಂಗಾರ್ಯ

4 ಕೌಶಿಕ ರಾಮಾಯಣ (ಬತ್ತಲೇಶ್ವರ) :
ಸಂ : ಶಿವರಾಮಕಾರಂತ

5 ಕಪೋತ ಚರಿತೆ—ವೆಂಕಟಾಚಲವಾಸ ಅಂಕಿತ—
ಅಮುದ್ರಿತ ಹಸ್ತಪ್ರತಿ

6 ಶ್ರೀರಾಮಕಥಾನಕಗಳುಳ್ಳ ಯಕ್ಷಗಾನ ಪ್ರಸಂಗಗಳು

7 ಕುಮಾರ ವಾಲ್ಮೀಕಿ ಒಂದು ಅಧ್ಯಯನ—
ಡಾ. ಎಚ್. ಸೀತಾರಾಮಾಚಾರ್ಯ (ಪಿಎಚ್.ಡಿ.ಗಾಗಿ ಸಿದ್ಧಪಡಿಸಿದ ಸಂಪ್ರಬಂಧ)
ಪ್ರ: ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ (1976)

8 ಶ್ರೀಮದ್ವಾಲ್ಮೀಕಿ ರಾಮಾಯಣಮ್—
ಮೂಲ ಮತ್ತು ಅನುವಾದ :
ವಿದ್ವಾನ್ ಎನ್. ರಂಗನಾಥಶರ್ಮ

9 ಅಧ್ಯಾತ್ಮ ರಾಮಾಯಣ—ಚೌಕಾಂಬ ಪ್ರೆಸ್
10 ಆನಂದ ರಾಮಾಯಣ—
ಆನಂದಾಶ್ರಮ ಸಂಸ್ಕೃತ ಗ್ರಂಥಾವಲಿ
11 ಮಧ್ವಾಚಾರ್ಯರ—ಸರ್ವಮೂಲ ಗ್ರಂಥಗಳು
ಮುಖ್ಯವಾಗಿ ಮಹಾಭಾರತ ತಾತ್ಪರ್ಯ ನಿರ್ಣಯ
12 The Sevunas of Devagiri—
A. V. Narasimha Murthy
13 ರಾಮಕಥಾ (ಹಿಂದಿಯಲ್ಲಿ)—ರೆ. ಫಾ. ಕಾಮಿಲ್ ಬುಲ್ಕೆ

ಕೆ.ಸಂ ೨೪೩೭೭—ವಿವಿಮು—೫,೦೦೦ ಪ್ರತಿಗಳು—೭-೧೧-೮೩

# ಕೆಲವು ಸಾಹಿತ್ಯ ಕೃತಿಗಳು

## ಬೆಲೆ : ೨೫ ಪೈಸೆಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ॥ ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ॥ ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ॥ ಹಿರಣ್ಮಯಿ

೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ॥ ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ॥ ಕೆ. ಕೃಷ್ಣಮೂರ್ತಿ
೩೧ ಅಣ್ಣನ ಆದರ್ಶ—ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—ದೇವಂಗಿ
ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ॥ ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣ ಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ॥ ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ॥ ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ॥ ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ॥ ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ॥ ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ